CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಏಪ್ರಿಲ್ ೨೨, ೨೦೦೪ (ವೈಶಾಖ ೨, ಶಕ ವರ್ಷ ೧೯೨೬) | ಸಂಚಿಕೆ ೧೭ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ: 10: ಡಿಟಿಸಿಆರ್: 1998-1999**

**ಉಪಸ್ಥಿತರು:** ಗೋವಿಂದಪ್ಪ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು**

ಅಬಕಾರಿ ನಿರೀಕ್ಷಕರು, ಅಬಕಾರಿ ಗುಪ್ತವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರು.

**ವಿರುದ್ಧ**

**ಆರೋಪಿಗಳು**

1. ಅಶ್ವಥ್ ಕುಮಾರ್ ಬಿನ್ ಟಿ. ದಾಮೋದರ್, ಕೊಲ್ಲಿಮೊಗರು ಮನೆ, ಕೊಲ್ಲಿಮೊಗರು ಗ್ರಾಮ ಮತ್ತು ಅಂಚೆ, ಸುಳ್ಯ ತಾಲ್ಲೂಕು.
2. ಕೆ. ಪದ್ಮನಾಭ ಬಿನ್ ದೂಮಯ್ಯ ಪೂಜಾರಿ, ಕೆಂಪುಗುಡ್ಡೆ ಮನೆ, ನಾವೂರು ಅಂಚೆ, ಬಂಟ್ವಾಳ ತಾಲ್ಲೂಕು.
3. ಮೆ: ಕರ್ನಾಟಕ ಡಿಸ್ಟಿಲರೀಸ್, ಬಂಟ್ವಾಳ: ಮಾಲೀಕರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 15.7.1998 ರಂದು ಅಬಕಾರಿ ಉಪ ನಿರೀಕ್ಷಕರು ಗುಪ್ತ ವಾರ್ತಾದಳ, ಮಂಗಳೂರು ಇವರು ಮಂಗಳೂರು ನಗರದ ಪಡೀಲ್ ಎಂಬಲ್ಲಿ ಮಾದಕ ವಸ್ತುಗಳ ಸಾಗಣೆ ತಡೆಗಾಗಿ ಗಸ್ತು ಕಾರ್ಯ ನಿರ್ವಹಿಸುತ್ತಿರುವಾಗ ಮಂಗಳೂರು ಕಡೆಗೆ ಬರುತ್ತಿದ್ದ ಬಿಳಿ ಬಣ್ಣದ ಅಂಬಾಸಿಡರ್ ಕಾರು ಸಂಖ್ಯೆ: ಕೆಎ-19-ಎಂ-877 ನ್ನು ತಡೆದು ನಿಲ್ಲಿಸಿ ಪರಿಶೀಲಿಸಲಾಗಿ ಕಾರಿನ ಹಿಂದಿನ ಸೀಟಿನಲ್ಲಿ ಹಾಗೂ ಡಿಕ್ಕಿಯಲ್ಲಿ ಒಟ್ಟು 15 ಪೆಟ್ಟಿಗೆ ಮದ್ಯದ ಶೀಷೆಗಳಿರುವುದು ಕಂಡುಬಂದಿದ್ದು ಸದ್ರಿ ಮದ್ಯವನ್ನು ಸಾಗಾಟ ಮಾಡಲು ರಹದಾರಿ ಇದೆಯೇ? ಎಂದು ಕೇಳಿದಾಗ ಕಾರಿನ ಚಾಲಕನು ಇಲ್ಲವೆಂದು ಉತ್ತರಿಸಿದ್ದು ಮತ್ತು ವಿಚಾರಣೆಯ ಸಮಯ ಸಮರ್ಪಕವಾದ ಉತ್ತರವನ್ನು ನೀಡದಿದ್ದಾಗ ಸದ್ರಿ ಸ್ಥಳದಲ್ಲಿ ಸ್ವತಂತ್ರ ಸಾಕ್ಷಿ ದೊರಕದೆ ಇದ್ದುದರಿಂದ ಇಲಾಖೆಯವರನ್ನು ಸಾಕ್ಷಿದಾರರನ್ನಾಗಿಸಿಕೊಂಡು ಮದ್ಯದ ಪೆಟ್ಟಿಗೆಗಳನ್ನು ಪರಿಶೀಲಿಸಲಾಗಿ ಮದ್ಯದ ವಿವರ ಈ ಕೆಳಗಿನಂತೆ ಇರುತ್ತದೆ.

| | | |
|---|---|---|
| 1 | ಎ.ಸಿ. ಡೀಲಕ್ಸ್ ಕೋಕೋನೆಟ್ ಫೆನ್ನಿ | 375 ಮಿಲಿ X 24 X 3 ಪೆಟ್ಟಿಗೆಗಳು |
| 2 | ಎ.ಸಿ. ಡೀಲಕ್ಸ್ ಕೋಕೋನೆಟ್ ಫೆನ್ನಿ | 180 ಮಿಲಿ X 48 X 12 ಪೆಟ್ಟಿಗೆಗಳು |
| | **ಒಟ್ಟು** | **15 ಪೆಟ್ಟಿಗೆಗಳು** |

ಮೇಲಿನ ಮದ್ಯದಿಂದ ಗಾತ್ರವಾರು ಒಂದರಂತೆ 2 ಶೀಷೆಗಳನ್ನು ಮಾದರಿಯಾಗಿ ತೆಗೆದು ಅವುಗಳಿಗೆ ಬಟ್ಟೆದಾರ ಕಟ್ಟಿ ಇಲಾಖೆಯ ಸೀಲಿನಿಂದ ಸೀಲು ಮಾಡಿ ಚಾಲಕನ ವಿಳಾಸ ಕೇಳಲು ಆತನು ತನ್ನ ಹೆಸರು ಅಶ್ವಥ್ ಕುಮಾರ್ ಬಿನ್ ದಾಮೋದರ ಪ್ರಾಯ: 25 ವರ್ಷ, ಕೊಲ್ಲಮೊಗರು ಅಂಚೆ, ಸುಳ್ಯ ತಾಲ್ಲೂಕು ಎಂದು ತಿಳಿಸಿರುತ್ತಾನೆ. ಅಪರಾಧಿಯ ಹೆಸರು ವಿಳಾಸವಿರುವ ಚೀಟಿಗಳನ್ನು ಮಾದರಿ ಶೀಷೆಗಳಿಗೂ ಹಾಗೂ ಮದ್ಯದ ಪೆಟ್ಟಿಗೆಗಳ ಮೇಲೆ ಅಂಟಿಸಿ ಸ್ಥಳ ಮಹಜರಿನ ಮೂಲಕ ವಾಹನವನ್ನು ಸ್ವತ್ತುಗಳೊಂದಿಗೆ ಸರ್ಕಾರಕ್ಕೆ ವಶಪಡಿಸಿಕೊಂಡು ಕಾರಿನ ಚಾಲಕನನ್ನು ದಸ್ತಗಿರಿ ಮಾಡಿ ಇದು ಅಬಕಾರಿ ಕಾಯ್ದೆ ಕಲಂ 11, 14, 38 ಎ ಪ್ರಕಾರ ಅಪರಾಧವಾಗಿದ್ದು ಕಲಂ 34 ರಂತೆ ಶಿಕ್ಷಾರ್ಹವಾಗಿದ್ದರಿಂದ ಅಪರಾಧಿಯ ವಿರುದ್ಧ ಮೊಕದ್ದಮೆ ಸಂಖ್ಯೆ: 2/98-99 ದಿನಾಂಕ: 15.7.98 ರ ಮೂಲಕ ಪ್ರಕರಣವನ್ನು ದಾಖಲಿಸಿ ಪ್ರ.ಮಾ. ವರದಿಯನ್ನು ಮಾನ್ಯ ನ್ಯಾಯಾಲಯಕ್ಕೂ ಮತ್ತು ಪ್ರಾಧಿಕಾರಕ್ಕೂ ಸಲ್ಲಿಸಿ ಪ್ರಾಧಿಕಾರದ ಅನುಮತಿಯ ಮೇರೆಗೆ ಪ್ರಕರಣವನ್ನು ಮುಂದಿನ ನಡವಳಿಯ ಬಗ್ಗೆ ಅಬಕಾರಿ ಉಪ ನಿರೀಕ್ಷಕರು, ಕಂಕನಾಡಿ ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಕಂಕನಾಡಿ ಉಪ ವಲಯದ ಉಪ ನಿರೀಕ್ಷಕರು ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾಗಿದ್ದ ಫೆನ್ನಿಯ ಮಾದರಿ ಶೀಷೆಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ರಾಸಾಯನಿಕ ತಜ್ಞರ ವರದಿಯಂತೆ ಫೆನ್ನಿಯು ಮಾನವ ಸೇವನೆಗೆ ಯೋಗ್ಯವಾಗಿದ್ದರಿಂದ ಪ್ರಾಧಿಕಾರವು ಸದ್ರಿ ಮದ್ಯವನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿಗೆ ಆದೇಶ ಮಾಡಿರುತ್ತದೆ.

ಪ್ರಕರಣದಲ್ಲಿ ಜಪ್ತುಗೊಳಿಸಲಾಗಿದ್ದ ವಾಹನ ಮಾಲೀಕರು ತನ್ನ ವಕೀಲರ ಮೂಲಕ ವಾಹನದ ಮಧ್ಯಂತರ ಬಿಡುಗಡೆಗೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪ್ರಾಧಿಕಾರವು ವಾಹನ ಮಾಲೀಕರಿಗೆ ದಿನಾಂಕ: 17.8.98 ರಂದು ಕಾರಣ ಕೇಳಿ ನೋಟೀಸನ್ನು ನೀಡಿದ್ದು ಸದ್ರಿ ನೋಟೀಸಿಗೆ ವಾಹನ ಮಾಲೀಕರು ದಿ: 28.8.98 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ. ತದನಂತರ, ವಾಹನದ ಮಧ್ಯಂತರ ಬಿಡುಗಡೆಗೆ ಸಲ್ಲಿಸಿದ್ದ ಅರ್ಜಿಯ ವಿಲೇವಾರಿ ಬಗ್ಗೆ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ತೀರ್ಪು ನೀಡಿ ಮಧ್ಯಂತರ ಬಿಡುಗಡೆಗೆ ನೀಡಲಾಗಿರುವ ಅರ್ಜಿಯ ದಿನಾಂಕದಿಂದ ನಾಲ್ಕು ವಾರಗಳಲ್ಲಿ ಮಧ್ಯಂತರ ಬಿಡುಗಡೆಗೆ ನೀಡಲಾಗಿದ್ದ ಅರ್ಜಿಯನ್ನು ವಿಲೇವಾರಿ ಮಾಡಲು ಆದೇಶ ನೀಡಿರುತ್ತದೆ. ನಂತರ ಈ ಪ್ರಾಧಿಕಾರವು ವಾಹನದ ಮಧ್ಯಂತರ ಬಿಡುಗಡೆಗೆ ನೀಡಲಾಗಿದ್ದ ಅರ್ಜಿಯನ್ನು ತಿರಸ್ಕರಿಸಿ ದಿ: 11.2.99 ರಂದು ಆದೇಶ ನೀಡಿರುತ್ತದೆ. ಪ್ರಾಧಿಕಾರವು ನೀಡಲಾದ ಆದೇಶದ ವಿರುದ್ಧ ಅರ್ಜಿದಾರರು ಮೂರನೇ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ್ದು ಮಾನ್ಯ ಸತ್ರ ನ್ಯಾಯಾಲಯವು ದಿ: 4.9.99 ರಂದು ತೀರ್ಪು ನೀಡಿ ವಾಹನವನ್ನು ರೂ. 99,000/- ಗಳ ಇಂಡೆಮ್ನಿಟಿ ಬಾಂಡ್ ಮತ್ತು ಒಂದು ಜಾಮೀನಿನೊಂದಿಗೆ ಹಾಗೂ ಉಳಿದ ಷರತ್ತುಗಳೊಂದಿಗೆ ಬಿಡುಗಡೆ ಮಾಡಲು ಆದೇಶಿಸಿರುತ್ತದೆ. ಮಾನ್ಯ ಸತ್ರ ನ್ಯಾಯಾಲಯದ ಆದೇಶದ ಅನ್ವಯ ಪ್ರಾಧಿಕಾರವು ದಿ: 16.12.99 ರಂದು ಮಧ್ಯಂತರ ಬಿಡುಗಡೆಗೆ ಆದೇಶಿಸಿ ವಾಹನವನ್ನು ವಾಹನ ಮಾಲೀಕರ ವಶಕ್ಕೆ ನೀಡಿರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ ನಾಲ್ಕು ಸಾಕ್ಷಿಗಳನ್ನು ಪ್ರತಿರಕ್ಷಾ ಪರ ಒಂದು ಸಾಕ್ಷಿಯನ್ನು ವಿಚಾರಣೆಗೆ ಒಳಪಡಿಸಿ ಅವರ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷಾಧಾರಗಳಿಂದ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 15.7.1998 ರಂದು ವಾಹನ ಅಂಬಾಸಿಡರ್ ಕಾರು ಸಂ: ಕೆಎ-19-ಎಂ-877 ರಲ್ಲಿ ಅಕ್ರಮ ಮದ್ಯವನ್ನು ಸಾಗಾಣಿಕೆ ಮಾಡಲಾಗಿತ್ತೇ?
2. ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನ ನನ್ನದು ಮತ್ತು ತನಗೆ ತಿಳಿಯದೇ ಅಕ್ರಮ ಮದ್ಯಸಾಗಣೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತುಪಡಿಸಿದ್ದಾರೆಯೇ?
3. ಜಪ್ತುಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದೂ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಇಲ್ಲ ಎಂದೂ ಮೂರನೇ ಅಂಶವನ್ನು ಕೊನೆಯ ಆದೇಶದಂತೆ.

**ಪ್ರಾಸಾ-1:**

ಶ್ರೀ ಶಂಕರ ಮುಖಾರಿ, ಅಬಕಾರಿ ಉಪ ನಿರೀಕ್ಷಕರು, ಗುಪ್ತವಾರ್ತಾದಳ, ಮಂಗಳೂರು ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ: 14.10.99 ರಂದು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ದಿ: 15.7.1998 ರಂದು ಸಂಜೆ 8.30 ರ ಸಮಯ ಮಂಗಳೂರು ನಗರದ ಪಡೀಲ್ ಎಂಬಲ್ಲಿ ರಾಷ್ಟ್ರೀಯ ಹೆದ್ದಾರಿ 48 ರಲ್ಲಿ ರಸ್ತೆಗಾವಲು ನಡೆಸುತ್ತಿದ್ದಾಗ ಒಂದು ಬಿಳಿಬಣ್ಣದ ಅಂಬಾಸಿಡರ್ ಕಾರು ಸಂಖ್ಯೆ: ಕೆಎ-19-ಎಂ-877 ಬಿ.ಸಿ. ರೋಡ್ ಕಡೆಯಿಂದ ಬರುತ್ತಿದ್ದು, ಸಂಶಯದ ಮೇಲೆ ಕಾರನ್ನು ನಿಲ್ಲಿಸಿ ಪರಿಶೀಲನೆ ಮಾಡಲು ಕಾರಿನ ಹಿಂಭಾಗದ ಸೀಟಿನಲ್ಲಿ 15 ಪೀಟಿಗೆ ಎ.ಸಿ. ಡೀಲಕ್ಸ್ ಕೊಕೋನೆಟ್ ಫೆನ್ನಿ ಇರುವುದು ಪತ್ತೆಯಾಗಿದ್ದು ಅದು ಒಟ್ಟು 136.650 ಲೀಟರು ಇರುತ್ತದೆ. ಕಾರಿನಲ್ಲಿ ಚಾಲಕನಲ್ಲದೆ 2 ವ್ಯಕ್ತಿಗಳಿದ್ದರು. ರಹದಾರಿಯ ಬಗ್ಗೆ ವಿಚಾರ ಮಾಡಲು ಯಾವುದೇ ದಾಖಲೆಗಳನ್ನು ಹಾಜರುಪಡಿಸಲಿಲ್ಲ. ಈ ಕಾರಣ ಕಾರನ್ನು ಮದ್ಯದೊಂದಿಗೆ ಸರ್ಕಾರದ ವಶಪಡಿಸಿಕೊಂಡು ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ ದೊರೆತ ಮದ್ಯದಿಂದ 375 ಮಿಲಿ ಹಾಗೂ 180 ಮಿಲಿ 2 ಬಾಟ್ಲಿಗಳನ್ನು ಸ್ಯಾಂಪಲ್‌ಗೆಂದು ತೆಗೆದಿರುತ್ತೇನೆ. ಅಪರಾಧಿಯನ್ನು ದಸ್ತಗಿರಿ ಮಾಡಿ ಪ್ರಕರಣವನ್ನು ಸಂಖ್ಯೆ: 2/98-99 ದಿ: 15.7.98 ರ ಮೂಲಕ ದಾಖಲುಪಡಿಸಿ ಸ್ವತ್ತು ಪಟ್ಟಿಯೊಂದಿಗೆ ಜಪ್ತುಪಡಿಸಿದ ಸ್ವತ್ತುಗಳನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಿರುವುದಾಗಿ ತಿಳಿಸಿರುತ್ತಾರೆ. ಪ್ರಥಮ ಮಾಹಿತಿಯನ್ನು ನೋಡಿ ಅದನ್ನು ನಿಶಾನೆ ಪಿ-1 ಎಂದು ನಿಶಾನೆ-ಪಿ1ಎ ಅವರ ಸಹಿಯೆಂದು ಗುರುತಿಸಲಾಯಿತು. ಮಹಜರನ್ನು ಅದನ್ನು ನಿಶಾನೆ ಪಿ-2 ಎಂದೂ, ಸ್ವತ್ತು ಪಟ್ಟಿಯನ್ನು ನಿಶಾನೆ ಪಿ-3, ರಾಸಾಯನಿಕ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಮದ್ಯ ಸಾಗಣೆಯ ಬಗ್ಗೆ ಯಾವುದೇ ಗುಪ್ತ ವರ್ತಮಾನವಿರಲಿಲ್ಲ. ದಿ: 15.7.98 ರಂದು ಅಬಕಾರಿ ರಕ್ಷಕರೊಂದಿಗೆ ಕರ್ತವ್ಯ ನಿರ್ವಹಿಸುತ್ತಿದ್ದೆನು. ನಾನು ವಾಹನವನ್ನು ಪಡೀಲ್ ವೃತ್ತದಿಂದ 50 ಮೀಟರು ದೂರದಲ್ಲಿ ಜಪ್ತು ಪಡಿಸಿರುತ್ತೇನೆ. ಅಲ್ಲಿ ಬಸ್ಸು ನಿಲುಗಡೆಯು ಇರುತ್ತದೆ. ಅಲ್ಲಿ ಸಾಕಷ್ಟು ವಾಹನಗಳು ಓಡಾಡುತ್ತದೆ. ಸದ್ರಿ ಸ್ಥಳದಲ್ಲಿ ಕೆಲವಾರು ಅಂಗಡಿಗಳು, ಹೋಟೆಲುಗಳು ಇರುತ್ತದೆ. ಈ ಪ್ರಕರಣದ ಅಂತಿಮ ವರದಿಯನ್ನು ಸಲ್ಲಿಸಿರುವುದು ಗೊತ್ತಿಲ್ಲ. ಆ ದಿನದಂದು ಕಾರಿನಲ್ಲಿ ಚಾಲಕ ಒಬ್ಬನೇ ಇರುತ್ತಾನೆ. ನಾನು ಮಾದರಿಯನ್ನು ಪ್ರಯೋಗ ಶಾಲೆಗೆ ಕಳುಹಿಸಿರುವುದಿಲ್ಲ. ಈ ಪ್ರಕರಣಕ್ಕೂ ಮತ್ತು ವಾಹನ ಮಾಲೀಕರಿಗೂ ಸಂಬಂಧವಿಲ್ಲ ಎಂದರೆ ಸರಿಯಲ್ಲ. ಕಾರಿನಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಣೆ ಮಾಡುತ್ತಿರಲಿಲ್ಲ ಎಂದರೆ ಸರಿಯಲ್ಲ. ನಾನು ಪಂಚನಾಮೆಗೆ ಸಾರ್ವಜನಿಕರಿಂದ ಸಹಿ ಪಡೆದಿರುವುದಿಲ್ಲ. ಸ್ಥಳದಲ್ಲಿ ಪಂಚರು ದೊರಕುತ್ತಿದ್ದರು ಎಂದರೆ ಸರಿಯಲ್ಲ. ಅಕ್ರಮ ಮದ್ಯ ತಯಾರಿಕೆ ಹಾಗೂ ಸಾಗಾಣಿಕೆಯ ಬಗ್ಗೆ ಅಬಕಾರಿ ದಾಳಿಗೆ ಹೋಗುತ್ತಿರುತ್ತೇವೆ. ಸದ್ರಿ ಸಮಯದಲ್ಲಿ ಅಕ್ರಮ ಮದ್ಯವನ್ನು ಸ್ಥಳದಲ್ಲಿಯೇ ಬಿಟ್ಟು ಓಡಿ ಹೋಗುತ್ತಾರೆ ಎಂದರೆ ಸರಿಯಲ್ಲ. ಪ್ರಕರಣದ ಸಲುವಾಗಿ ನಿಶಾನೆ ಪಿ 1 ರಿಂದ 4 ರವರೆಗಿನ ದಾಖಲೆಗಳನ್ನು ಸೃಷ್ಟಿಪಡಿಸಲಾಗಿದೆ. ಮಹಜರನ್ನು ಕಛೇರಿಯಲ್ಲಿ ತಯಾರಿಸಲಾಗಿದೆ ಎಂದರೆ ಸರಿಯಲ್ಲ ಎಂದು ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ.

**ಪ್ರಾ.ಸಾ-2:**

ಶ್ರೀ ಯು. ಉಮೇಶ್ ಅಬಕಾರಿ ರಕ್ಷಕ, ಗುಪ್ತವಾರ್ತಾದಳ, ಮಂಗಳೂರು ಇವರು ದಿ: 18.5.2000 ರಂದು ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ನುಡಿದಿರುತ್ತಾರೆ. ಅವರು ದಿ: 15.7.98 ರಂದು ರಾತ್ರಿ 7.00 ಗಂಟೆಗೆ ಅಬಕಾರಿ ಉಪ ಅಧೀಕ್ಷಕರ ನಿರ್ದೇಶನದಂತೆ ಪಡೀಲ್ ರಾಷ್ಟ್ರೀಯ ಹೆದ್ದಾರಿಯಲ್ಲಿ ಅಬಕಾರಿ ಉಪ ನಿರೀಕ್ಷಕರೊಂದಿಗೆ ಗಸ್ತು ತಿರುಗುತ್ತಿರುವಾಗ ಬಿಳಿ ಬಣ್ಣದ ಅಂಬಾಸಿಡರ್ ಕಾರನ್ನು ನಿಲ್ಲಿಸಿದೆವು. ಕಾರನ್ನು ಪರಿಶೀಲಿಸಿದಾಗ ಕಾರಿನ ಹಿಂಬದಿ ಸೀಟು ಹಾಗೂ ಡಿಕ್ಕಿಯಲ್ಲಿ 15 ಮದ್ಯ ತುಂಬಿದ ಪೆಟ್ಟಿಗೆಗಳು ಇದ್ದವು. ಈ ಬಗ್ಗೆ ಯಾವುದೇ ರಹದಾರಿ ಪತ್ರ ಹಾಜರುಪಡಿಸಿರುವುದಿಲ್ಲ. ಸ್ಥಳದಲ್ಲಿ ಯಾರೂ ಸಾಕ್ಷಿಗಳು ಸಿಗದ ಕಾರಣ ಸಿಬ್ಬಂದಿಯವರನ್ನೇ ಸಾಕ್ಷಿದಾರರನ್ನಾಗಿಸಿ ಮದ್ಯ ಮತ್ತು ಕಾರನ್ನು ಜಪ್ತಿ ಮಾಡಿದೆವು. ಅಬಕಾರಿ ಉಪ ನಿರೀಕ್ಷಕರು ಮಹಜರು ಬರೆದರು. ಅದಕ್ಕೆ ತಾನು ಸಹಿ ಮಾಡಿದೆನು. ನನ್ನ ಸಹಿಯನ್ನು ನಿಶಾನೆ ಪಿ-2ಎ ಎಂದು ಗುರುತಿಸಲಾಯಿತು ಎಂದು ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರ ನೀಡುತ್ತಾ ಪಡೀಲ್ ಜಂಕ್ಷನ್ ಎಂಬುದು ತುಂಬಾ ಬಿಜಿ ಜಾಗ ಮತ್ತು ಕಾರು ನಿಲ್ಲಿಸಿದ 25 ಮೀಟರು ಅಂತರದಲ್ಲಿ ಬಸ್ ನಿಲ್ದಾಣ, ಹೋಟೆಲ್, ಮನೆಗಳು ಇವೆ ಎಂದರೆ ಸರಿ. ತಾನು ಸಾಕ್ಷಿಗಳನ್ನು ಹುಡುಕಿಕೊಂಡು ಹೋಗಿರುವುದಿಲ್ಲ. ಈ ಪ್ರಕರಣದಲ್ಲಿ 3ನೇ ಜೆ.ಎಂ.ಎಫ್.ಸಿ ನ್ಯಾಯಾಲಯದಲ್ಲಿ ಸಾಕ್ಷಿ ನುಡಿದಿರುತ್ತೇನೆ. ಕಾರಿಗೂ ಮತ್ತು ಮದ್ಯಕ್ಕೂ ಸಂಬಂಧವಿಲ್ಲ ಎಂದರೆ ಕಾರನ್ನು ಸುಳ್ಳು ಕೇಸು ಹಾಕಿ ಸೀಜ್ ಮಾಡಿದ್ದು ಎಂದರೆ ಸರಿಯಲ್ಲ ಕಾರು ನಿಲ್ಲಿಸಿದ ಜಾಗದಲ್ಲಿ ಸಾರ್ವಜನಿಕರು ಇದ್ದರೂ ಸುಳ್ಳು ಕೇಸು ಹಾಕಿದ ಕಾರಣ ಅವರನ್ನು ಸಾಕ್ಷಿಯಾಗಿ ತೆಗೆದುಕೊಳ್ಳಲಿಲ್ಲ ಮತ್ತು ಮಹಜರಿನಲ್ಲಿ ಇರುವ ವಿಷಯ ಸುಳ್ಳು ಎಂದರೆ ಸರಿಯಲ್ಲ ಎಂದು ಹೇಳಿಕೆ ನೀಡಿರುತ್ತಾರೆ.

**ಪ್ರಾ.ಸಾ-3:**

ಶ್ರೀ ಯು.ರಾಮ, ಅಬಕಾರಿ ರಕ್ಷಕ, ಉಳ್ಳಾಲ ವಲಯ ಇವರು ಪ್ರಾಧಿಕಾರದ ಮುಂದೆ ದಿ: 24.1.02 ರಂದು ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ಅವರು ದಿ: 20.8.98 ರಂದು 375 ಮಿಲಿ ಮತ್ತು 180 ಮಿಲಿ 2 ಮಾದರಿ ಶೀಷೆಗಳನ್ನು ರಾಸಾಯನಿಕ ವಿಶ್ಲೇಷಣೆಗೆ ತೆಗೆದುಕೊಂಡು ಹೋಗಿ ಪ್ರಯೋಗ ಶಾಲೆಗೆ ನೀಡಿ ದಿನಾಂಕ: 16.9.1998 ರಂದು 4 ಬಾಟ್ಲಿ ಮತ್ತು ರಾಸಾಯನಿಕ ವಿಶ್ಲೇಷಣಾ ಪ್ರಮಾಣ ಪತ್ರವನ್ನು ಉಳ್ಳಾಲ ವಲಯ ನಿರೀಕ್ಷಕರಿಗೆ ಒಪ್ಪಿಸಿದೆನು. ಸ್ಯಾಂಪಲ್ ಬಾಟ್ಲಿಗಳಿಗೆ ಸೀಲು ಮಾಡಲಾಗಿತ್ತು. ಸದ್ರಿ ಸ್ಯಾಂಪಲ್ ಬಾಟ್ಲಿಗಳನ್ನು ಗುರುತಿಸುತ್ತೇನೆ. ರಾಸಾಯನಿಕ ವಿಶ್ಲೇಷಣಾ ಪ್ರತಿಯನ್ನು ತೋರಿಸಿದ್ದು ಅದನ್ನು ಗುರುತಿಸುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ. ಅರ್ಜಿದಾರರು ಹಾಜರಿಲ್ಲದ ಕಾರಣ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗಿರುತ್ತದೆ.

**ಪ್ರಾ.ಸಾ-4:**

ಶ್ರೀ ಯಶವಂತ ಕುಮಾರ್, ಅಬಕಾರಿ ನಿರೀಕ್ಷಕರು (ನಿವೃತ್ತ) ಇವರು ಪ್ರಾಧಿಕಾರದ ಮುಂದೆ ದಿ: 21.11.2002 ರಂದು ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ಅವರು ದಿ: 10.8.98 ರಂದು ಈ ತಕ್ಷೀರಿನ ದಾಖಲೆ ಪತ್ರಗಳನ್ನು ಪಡೆದುಕೊಂಡಿದ್ದು ದಿ: 20.8.98 ರಂದು ಅಬಕಾರಿ ಮುಖ್ಯ ರಕ್ಷಕ ಯು. ರಾಮ ಇವರ ಮೂಲಕ ಕೋರಿಕೆ ಪತ್ರ, ಮಾದರಿ ಸೀಲು ಸ್ಯಾಂಪಲ್ ಬಾಟ್ಲಿಗಳನ್ನು ರಾಸಾಯನಿಕ ತಜ್ಞರಿಗೆ ಕಳುಹಿಸಿಕೊಟ್ಟಿರುತ್ತೇನೆ. ದಿ: 16.9.98 ರಂದು ಪರೀಕ್ಷಿತ ಬಾಟ್ಲಿಗಳು, ತಜ್ಞರ ವರದಿಯನ್ನು ಹಿಂದೆ ತರಿಸಿರುತ್ತೇನೆ. ದಿ: 15.2.99 ರಂದು ಅಬಕಾರಿ ಉಪ ಆಯುಕ್ತರ ಆದೇಶದ ಮೇರೆಗೆ ಮದ್ಯವನ್ನು ಸನ್ನದ್ದುದಾರರಿಗೆ ವಿಲೇವಾರಿ ಮಾಡಿರುತ್ತೇನೆ. ದಿ: 16.2.99 ರಿಂದ ಅಬಕಾರಿ ಉಪ ಆಯುಕ್ತರ ಆದೇಶದಂತೆ ವಾಹನವನ್ನು ಆರ್.ಸಿ. ದಾರರಿಗೆ ಬಿಟ್ಟುಕೊಟ್ಟಿರುವುದಾಗಿ ಹಾಗೂ ಪ್ರಕರಣದ ಅಂತಿಮ ದೋಷಾರೋಪಣಾ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುವುದಾಗಿ ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರ ನೀಡುತ್ತಾ ದಿ: 20.8.98 ರಂದು ರಾಸಾಯನಿಕ ತಜ್ಞರಿಗೆ ಮಾದರಿ ಬಾಟ್ಲಿಗಳನ್ನು ಕಳುಹಿಸಿರುತ್ತೇನೆ ಎಂದು ಸುಳ್ಳು ಹೇಳುತ್ತೀರೆಂದರೆ ಸರಿಯಲ್ಲ. ಪ್ರಕರಣದ ಬಗ್ಗೆ ಯಾವುದೇ ತನಿಖೆಯನ್ನು ಮಾಡಿರುವುದಿಲ್ಲ ಎಂದರೆ ಸರಿಯಲ್ಲ. ಪ್ರಕರಣದ ದೋಷಾರೋಪಣಾ ಪಟ್ಟಿಯನ್ನು ತನ್ನ ಕಾರ್ಯಾಲಯದಲ್ಲಿ ತಯಾರಿಸಿ ನ್ಯಾಯಾಲಯಕ್ಕೆ ಸಲ್ಲಿಸಲಾಗಿದೆ. ಕಾರ್ಯಾಲಯದಲ್ಲಿ ದಾಖಲೆಗಳನ್ನು ಸೃಷ್ಟಿ ಮಾಡಿ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆ ಎಂದರೆ ಸರಿಯಲ್ಲ ಎಂದು ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ಪ್ರಾ.ಸಾ. 1 ರಿಂದ 4 ರವರೆಗಿನ ಸಾಕ್ಷಿಗಳ ಹೇಳಿಕೆಯ ಮೇಲೆ ದಿ: 15.7.98 ರಂದು ವಾಹನ ಅಂಬಾಸಿಡರ್ ಕಾರು ಸಂಖ್ಯೆ: ಕೆಎ 19 ಎಂ 877 ರಲ್ಲಿ ಫೆನ್ನಿ ಅಕ್ರಮವಾಗಿ ಸಾಗಣೆಯಾಗಿರುವುದು ನಿಜವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಿದೆ.

**ಡಿ.ಡಬ್ಲ್ಯೂ 1:**

ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನ ಮಾಲೀಕರಾದ ಶ್ರೀ ಪದ್ಮನಾಭ ಇವರು ದಿ: 29.6.2000 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ಅವರು ಕಾರಿನ ಮಾಲೀಕರಾಗಿದ್ದು ದಿ: 15.7.98 ರಂದು ಚಾಲಕ ಅಶ್ವಥ್ ಕುಮಾರ್ ಹತ್ತಿರ ರಿಪೇರಿಗೋಸ್ಕರ ಕಾರನ್ನು ಮಂಗಳೂರಿಗೆ ಕಳುಹಿಸಿದ್ದೆನು. ದಿ: 16.7.98 ರಂದು ಮಂಗಳೂರಿನ ಅಬಕಾರಿ ಅಧಿಕಾರಿಗಳು ಕಾರನ್ನು ಮತ್ತು ಚಾಲಕನನ್ನು ವಶಕ್ಕೆ ತೆಗೆದುಕೊಂಡಿರುತ್ತಾರೆ ಎಂದು ತಿಳಿಯಿತು ಎಂದು ತಿಳಿಸುತ್ತಾ 15.7.98 ರಂದು ಕಾರು ರಿಪೇರಿಗಾಗಿ ಹೋಗುವಾಗ ಪಡೀಲ್‌ನಲ್ಲಿ ಕಾರು ಕೆಟ್ಟು ಹೋಗಿ ಮಾರ್ಗದ ಬಂದಿ ನಿಂತಿತ್ತು. ಅಲ್ಲಿಂದ ಸ್ವಲ್ಪ ದೂರದಲ್ಲಿ ಅಬಕಾರಿ ಅಧಿಕಾರಿಗಳು ಪೊದೆಯಲ್ಲಿ ತಪಾಸಣೆ ಮಾಡುವಾಗ ಕಳ್ಳ ಸಾರಾಯಿ ಸಿಕ್ಕಿದ್ದು, ನನ್ನ ಕಾರನ್ನು ಸದ್ರಿ ಕಳ್ಳ ಸಾರಾಯಿ ಸಾಗಿಸಲು ಉಪಯೋಗಿಸಿದ್ದಿರಬಹುದು ಎಂಬ ಅನುಮಾನದಿಂದ ನನ್ನ ಕಾರನ್ನು ಜಪ್ತುಗೊಳಿಸಿ ನಮ್ಮ ಮೇಲೆ ಸುಳ್ಳು ಕೇಸು ಮಾಡಿರುತ್ತಾರೆ. ನನ್ನ ಕಾರನ್ನು ಕಳ್ಳ ಮದ್ಯ ಸಾಗಿಸಲು ಉಪಯೋಗಿಸಿದ್ದು ಮತ್ತು ಅದರಲ್ಲಿ ಕಳ್ಳ ಮದ್ಯ ಸಿಕ್ಕಿರುತ್ತದೆ ಎಂಬ ಆರೋಪ ಸುಳ್ಳು ಎಂದು ತಿಳಿಸಿರುತ್ತಾರೆ. ನಮ್ಮ ಮೇಲೆ ದಾಖಲು ಮಾಡಿದ್ದ ಮೊಕದ್ದಮೆಯಿಂದ ಮಾನ್ಯ ನ್ಯಾಯಾಲಯವು ಆರೋಪದಿಂದ ಮುಕ್ತಾಯಗೊಳಿಸಿರುವುದಾಗಿ ತಿಳಿಸುತ್ತಾ ತನ್ನ ವಾಹನವನ್ನು ತನ್ನ ವಶಕ್ಕಾಗಿ ನೀಡಬೇಕೆಂದು ತಿಳಿಸಿರುತ್ತಾರೆ.

ಮಾನ್ಯ ಎ.ಡಿ.ಪಿ ಇದರ ಪಾಟೀ ಸವಾಲಿಗೆ ಉತ್ತರಿಸುತ್ತಾ ಕಾರಿನ ಚಾಲಕನು 3 ತಿಂಗಳಿಗೆ ಮುಂಚೆ ಸೇರಿಕೊಂಡಿದ್ದು ದಿ: 15.7.98 ರಂದು ಎಷ್ಟು ಗಂಟೆಗೆ ಬಿಟ್ಟ ಎಂಬುದು ಜ್ಞಾಪಕವಿಲ್ಲ ಮತ್ತು ಮನೆ ಬಿಟ್ಟಾಗ ಚಾಲಕ ಮಾತ್ರ ಕಾರಿನಲ್ಲಿದ್ದ ಕಾರಿನ ಇಂಜಿನ್ ಕೆಲಸವಿದ್ದುದರಿಂದ ಅವನನ್ನು ಮಂಗಳೂರಿಗೆ ಕಳುಹಿಸಲಾಯಿತು. ಕಾರನ್ನು ಸ್ವಂತ ಉಪಯೋಗಕ್ಕೆ ಉಪಯೋಗಿಸುತ್ತಿದ್ದೆ. ಕಾರನ್ನು ಜಪ್ತುಗೊಳಿಸಿರುವುದು ಮಾರನೆಯ ದಿನ 10.00 ಗಂಟೆಗೆ ತಿಳಿಯಿತು. ನಾನು ಕಾರನ್ನು ಇಐಬಿ ಆಫೀಸಿನಲ್ಲಿ ನೋಡಿದೆ. ಅಲ್ಲಿ ಚಾಲಕನನ್ನು ಮಾತ್ರ ವಿಚಾರಣೆ ಮಾಡಿರುತ್ತೇನೆ. ನಾನು ನನ್ನ ಚಾಲಕನಿಗೆ ಅಕ್ರಮ ಸಾಗಾಟ ಮಾಡಬಾರದೆಂದು ಹೇಳಿಲ್ಲ. ಘಟನೆ ನಡೆದ ದಿನ ನಮ್ಮ ಕಾರಿನಲ್ಲಿ ಅಕ್ರಮ ಸಾರಾಯಿ ಸಾಗಾಟವಾಗುವ ವಿಷಯ ಗೊತ್ತಿತ್ತು ಮತ್ತು ನನ್ನ ಅನುಮತಿಯಿಂದಲೇ ಸಾಗಾಟವಾಗಿದೆಯೆಂದರೆ ಸರಿಯಲ್ಲ ಎಂದು ಮತ್ತು ಸಾರಾಯಿ ಸಾಗಾಟ ವಿಷಯ ಗೊತ್ತಿದ್ದರೂ ಸುಳ್ಳು ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ತಮ್ಮ ಹೇಳಿಕೆ ನೀಡಿರುತ್ತಾರೆ. ಮಾನ್ಯ ಸಹಾಯಕ ಅಭಿಯೋಜನಾ ನಿರ್ದೇಶಕರ ಪಾಟೀ ಸವಾಲಿಗೆ ಉತ್ತರಿಸುತ್ತಾ ವಾಹನವನ್ನು ಸೀಜ್ ಮಾಡಿದ ಮರುದಿವಸ ಅಧಿಕಾರಿಗಳಲ್ಲಿ ಯಾಕೆ ಗಾಡಿಯನ್ನು ವಶಪಡಿಸಿಕೊಂಡಿರೆಂದು ವಿಚಾರ ಮಾಡಿರುತ್ತೇನೆ. ಅಧಿಕಾರಿಗಳು ನನಗೆ ಏನೆಂದೂ ಸರಿಯಾದ ಉತ್ತರ ಕೊಡಲಿಲ್ಲ ಎಂದು ತಿಳಿಸಿರುತ್ತಾರೆ. ಆದರೆ ಮುಖ್ಯ ವಿಚಾರಣೆಯಲ್ಲಿ ಗಾಡಿಯನ್ನು ವಶಪಡಿಸಿಕೊಂಡ ಮಾರನೇ ದಿನ ಗಾಡಿಯನ್ನು ಇಐಬಿ ಆಫೀಸಿನಲ್ಲಿ ನೋಡಿದೆ ಅಲ್ಲಿದ್ದ ಚಾಲಕನನ್ನು ಬಿಟ್ಟು ಅಬಕಾರಿ ಅಧಿಕಾರಿಗಳೊಂದಿಗೆ ವಿಚಾರ ಮಾಡಿಲ್ಲವೆಂದು ಸಾಕ್ಷಿ ನೀಡಿರುತ್ತಾರೆ ಮತ್ತು ಈ ಅಕ್ರಮ ಸಾಗಣೆ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂದು ಯಾವುದೇ ಸಾಕ್ಷ್ಯಾಧಾರಗಳನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಿರುವುದಿಲ್ಲ. ಹಾಗೂ ಈ ಅಕ್ರಮವು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಆದುದರಿಂದ ಈ ಅಕ್ರಮ ಸಾಗಾಟವು ವಾಹನ ಮಾಲೀಕರ ತಿಳುವಳಿಕೆಯಿಂದಲೇ ನಡೆದಿದೆ ಎಂಬುದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಈ ಕಾರಣದಿಂದ ಎರಡನೇ ಅಂಶಕ್ಕೆ ಉತ್ತರ ನಕಾರಾತ್ಮಕವಾಗಿ ಇಲ್ಲ ಎಂದು ಪರಿಗಣಿಸಲಾಗಿದೆ.

ಈ ಪ್ರಕರಣದಲ್ಲಿ 1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 54 ರಡಿಯಲ್ಲಿ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆದಿರುವುದಿಲ್ಲ. ಹಾಗೂ ಪಡೆಯದಿರುವುದಕ್ಕೆ ಕಾರಣಗಳನ್ನು ನಮೂದಿಸಿ ಸರ್ಚ್ ಮೆಮೋವನ್ನು ತಯಾರಿಸಿರುವುದಿಲ್ಲ. ಈ ಕ್ರಮವನ್ನು ಕೈಗೊಳ್ಳದೇ ಇದ್ದ ಕಾರಣಕ್ಕಾಗಿ ಅಬಕಾರಿ ವಸ್ತುಗಳನ್ನು ವಶಪಡಿಸಿಕೊಂಡಿರುವುದು ಕಾನೂನು ಬಾಹಿರವಾಗುವುದಿಲ್ಲ. ಈ ಕುರಿತು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪನ್ನು ಉಲ್ಲೇಖಿಸಬಹುದಾಗಿದೆ. ಐ.ಎಲ್.ಆರ್-2004 ಕರ್ನಾಟಕ 527 ರಲ್ಲಿ ವರದಿಯಾದ ಪ್ರಕರಣ ಸೋಮನಾಥ ಕೆರೆಬೈಲ್ ವಿರುದ್ಧ ಸರ್ಕಾರ ಅಬಕಾರಿ ಉಪ ಆಯುಕ್ತರು, ಬೆಳಗಾಂ ಜಿಲ್ಲೆ, ಈ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಅಬಕಾರಿ ಕಾಯ್ದೆ ಕಲಂ 54ರ ಅಡಿಯ ಪ್ರಕ್ರಿಯೆಯನ್ನು ಅನುಸರಿಸುವಲ್ಲಿ ಅಧಿಕಾರಿಗಳು ವಿಫಲವಾದಲ್ಲಿ, ಕರ್ನಾಟಕ ಅಬಕಾರಿ ಕಾಯ್ದೆಯನ್ನು ಉಲ್ಲಂಘಿಸಿದ ಕಾರಣಕ್ಕಾಗಿ ವಶಪಡಿಸಿಕೊಂಡಿರುವ ಯಾವುದೇ ಅಬಕಾರಿ ವಸ್ತು ಕಾನೂನು ಬಾಹಿರವಾಗುವುದಿಲ್ಲ ಎಂಬುದನ್ನು ಸ್ಪಷ್ಟವಾಗಿ ವ್ಯಕ್ತಪಡಿಸುತ್ತದೆ. ಈ ಮೇಲೆ ವ್ಯಕ್ತಪಡಿಸಿರುವ ಅಭಿಪ್ರಾಯದಂತೆ ಪ್ರಸ್ತುತ ಪ್ರಕರಣದಲ್ಲಿ ಕಲಂ 54 ರ ಪ್ರಕ್ರಿಯೆಯನ್ನು ಅನುಸರಣೆ ಮಾಡದೇ ಇದ್ದರೂ ಜಪ್ತುಪಡಿಸಲಾಗಿರುವ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುತ್ತದೆ ಎಂದು ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಗಳು ರುಜುವಾತುಪಡಿಸಿದ್ದಲ್ಲಿ, ಜಪ್ತುಗೊಳಿಸಿರುವ ವಾಹನ ಕಾನೂನುಬಾಹಿರವಾಗುವುದಿಲ್ಲ ಹಾಗೂ ಮುಟ್ಟುಗೋಲು ಪ್ರಕರಣಕ್ಕೆ ಯಾವುದೇ ರೀತಿಯ ಧಕ್ಕೆಯುಂಟಾಗುವುದಿಲ್ಲ.

ಈ ಎಲ್ಲಾ ಕಾರಣಗಳಿಂದ ಹಾಗೂ ಪ್ರಾಧಿಕಾರಕ್ಕೆ ದೊರೆತಿರುವ ಸಾಕ್ಷ್ಯಾಧಾರಗಳಿಂದ ಸದ್ರಿ ವಾಹನದಲ್ಲಿ ಅಕ್ರಮವಾಗಿ ಫೆನ್ನಿ ಸಾಗಣೆಯಾಗಿರುವುದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನ ಅಂಬಾಸಿಡರ್ ಕಾರು ಸಂಖ್ಯೆ: ಕೆಎ-19-ಎಂ-877 ನಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ: 10: ಡಿಟಿಸಿಆರ್:1998-1999, ದಿನಾಂಕ: 25ನೇ ಮಾರ್ಚ್ 2004**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು, ಅಬಕಾರಿ ಗುಪ್ತ ವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರುರವರ ಮೊಕದ್ದಮೆ ಸಂಖ್ಯೆ: 2/1998-99 ದಿನಾಂಕ: 15.7.1998 ರಲ್ಲಿ ವಶಪಡಿಸಿಕೊಂಡಿರುವ ಅಂಬಾಸಿಡರ್ ಕಾರು ಸಂ: ಕೆಎ-19-ಎಂ-877 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 25.3.2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ. ಜಿಲ್ಲೆ, ಮಂಗಳೂರು.

**ಅನುಬಂಧ - 1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.: 1 - ಶ್ರೀ ಪಿ. ಶಂಕರ ಮುಖಾರಿ, ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ವಿಭಾಗ
ಪ್ರಾ.ಸಾ.: 2 - ಶ್ರೀ ಯು. ರಮೇಶ್, ಅಬಕಾರಿ ರಕ್ಷಕ, ಅಬಕಾರಿ ಗುಪ್ತವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರು
ಪ್ರಾ.ಸಾ.: 3 - ಯು. ರಾಮ, ಅಬಕಾರಿ ರಕ್ಷಕ, ಉಳ್ಳಾಲ
ಪ್ರಾ.ಸಾ.: 4 - ಶ್ರೀ ಯಶವಂತ ಕುಮಾರ್, ನಿವೃತ್ತ ಅಬಕಾರಿ ನಿರೀಕ್ಷಕರು

**ಅನುಬಂಧ - 2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಪ್ರಥಮ ವರ್ತಮಾನ ವರದಿಯ ಪ್ರತಿ
ನಿಶಾನೆ ಪಿ-2 - ಮಹಜರು ಪ್ರತಿ
ನಿಶಾನೆ ಪಿ-3 - ಸೊತ್ತುಗಳ ಪಟ್ಟಿ
ನಿಶಾನೆ ಪಿ-4 - ರಾಸಾಯನಿಕ ವರದಿಯ ಪ್ರತಿ

**ಅನುಬಂಧ - 3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

ಡಿ.ಡಬ್ಲ್ಯೂ -1 - ವಾಹನ ಮಾಲೀಕರು ಶ್ರೀ ಪದ್ಮನಾಭ, ಬಂಟ್ವಾಳ

**ಅನುಬಂಧ - 4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು** - ಇಲ್ಲ

ಪಿ.ಆರ್. 515

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ. ಜಿಲ್ಲೆ, ಮಂಗಳೂರು.

## ಲೋಕೋಪಯೋಗಿ ಇಲಾಖೆ

## ಅಧಿಸೂಚನೆ

### ಸಂ: ಲೋಇ 418 ಸೇಎಸು 2003, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2004

ಪ್ರಸ್ತುತ ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-I) (ವಿದ್ಯುತ್) ಹುದ್ದೆಗಳನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಿಂದ ನಿಯೋಜನೆ ಮೂಲಕ ಭರ್ತಿ ಮಾಡಲಾಗುತ್ತಿದೆ.

ಸರ್ಕಾರದ ಅಧಿಸೂಚನೆ ಸಂ. ಡಿಪಿಎಆರ್ 10 ಎಸ್‌ಆರ್‌ಡಿ 98 ದಿನಾಂಕ: 9.2.2000 ರಲ್ಲಿ ರಚಿಸಿರುವ ವಿಶೇಷ ನಿಯಮಗಳ ಮೂಲಕ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಿಂದ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಹೆಚ್.ಎ. ಕಾಂತರಾಜಪ್ಪ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿದ್ಯುತ್) ಇವರ ಸೇವೆಯನ್ನು ಲೋಕೋಪಯೋಗಿ ಇಲಾಖೆಯ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

ಆದೇಶ ಸಂ. ಲೋಇ 418 ಸೇಎಸು 2003 ದಿನಾಂಕ: 24.1.2004 ರಲ್ಲಿ ಲೋ.ಇ. ಯಲ್ಲಿನ ಸ.ಕಾ.ಇಂ. (ವಿ) ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರ್ಹ ಇಂಜಿನಿಯರುಗಳಿಗೆ ಕಾ.ಇಂ. (ವಿ) ಹುದ್ದೆಗೆ ಪದೋನ್ನತಿ ನೀಡಲು ಅನುಕೂಲವಾಗುವಂತೆ ನೇಮಕಾತಿ ವಿಧಾನವನ್ನು ನಿಗದಿಪಡಿಸಿ ಕಾರ್ಯಕಾರಿ ಆದೇಶವನ್ನು ಹೊರಡಿಸಲಾಗಿದೆ. ಪ್ರಸ್ತುತ ಲೋ.ಇ. ಯಲ್ಲಿನ ಸ.ಕಾ.ಇಂ. (ವಿ-1) (ವಿದ್ಯುತ್) ವೃಂದದ ಪ್ರತ್ಯೇಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಅವಶ್ಯಕತೆ ಉಂಟಾಗಿದೆ. ಆದುದರಿಂದ ಸ.ಕಾ.ಇಂ. (ವಿ-1) (ವಿದ್ಯುತ್) ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂ. ಲೋಇ 418 ಸೇಎಸು 2003 ದಿನಾಂಕ: 20.2.2004 ರಲ್ಲಿ ಪ್ರಕಟಿಸಿ ಈ ಜೇಷ್ಠತಾ ಪಟ್ಟಿಯಲ್ಲಿ ಹೇಳಲಾಗಿರುವ ಅಧಿಕಾರಿಯವರ ಜೇಷ್ಠತೆಯಿಂದ ಬಾಧಿತರಾಗುವ ಅಧಿಕಾರಿ : ನೌಕರರು ಯಾವುದೇ ಆಕ್ಷೇಪಣೆಗಳಿದ್ದಲ್ಲಿ, ಅಥವಾ ತಮ್ಮಗಳ ಹೆಸರನ್ನು ಈ ಜೇಷ್ಠತಾ ಪಟ್ಟಿಯಲ್ಲಿ ಸೇರಿಸಬೇಕಾದ ಸಂದರ್ಭ ಇದ್ದಲ್ಲಿ ಅಂತಹ ಅಧಿಕಾರಿ : ನೌಕರರು ಸಮರ್ಥನೆ ನೀಡುವ ದಾಖಲಾತಿಗಳೊಂದಿಗೆ, ಈ ಅಧಿಸೂಚನೆ ಹೊರಡಿಸಿದ ಹತ್ತು ದಿನದೊಳಗಾಗಿ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಬಹುಮಹಡಿಗಳ ಕಟ್ಟಡ, 5ನೇ ಹಂತ, ಡಾ: ಅಂಬೇಡ್ಕರ್ ವೀದಿ, ಬೆಂಗಳೂರು-1, ಇವರಿಗೆ ಲಿಖಿತ ಮೂಲಕ ಸಲ್ಲಿಸಲು ಕೋರಲಾಗಿತ್ತು. ಇದುವರೆವಿಗೂ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ.

ಅದರಂತೆ ಅಂತಿಮವಾಗಿ ಲೋಕೋಪಯೋಗಿ ಇಲಾಖೆಯಲ್ಲಿನ ಸ.ಕಾ.ಇಂ (ವಿ-1) (ವಿದ್ಯುತ್) ವೃಂದದ ಜೇಷ್ಠತಾ ಪಟ್ಟಿಯನ್ನು ಇದರೊಂದಿಗಿರುವ ಅನುಬಂಧದಲ್ಲಿರುವಂತೆ ಪ್ರಕಟಿಸಲಾಗಿದೆ.

ಪಿ.ಆರ್. 516 ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಸಿ. ರಾಜಪ್ಪ**

ಪೀಠಾಧಿಕಾರಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಎ)

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ಸಂಖ್ಯೆ: ಎಲ್.ಎನ್.ಡಿ.(ಎನ್) ಸಿಆರ್. 159/2001-02, ದಿ: 17ನೇ ಜನವರಿ 2004**

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಸೋಮಶೆಟ್ಟಿ ಹಳ್ಳಿ ಗ್ರಾಮದ ಸರ್ವೆ ನಂ. 60 ರಲ್ಲಿ 1-20 ಎಕರೆ ಜಮೀನನ್ನು ಸ್ಮಶಾನಕ್ಕಾಗಿ ಮೀಸಲಿಡುವ ಬಗ್ಗೆ.

**ಉಲ್ಲೇಖ:**
1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಬೆಂಗಳೂರು ಜಿಲ್ಲಾ ಪಂಚಾಯಿತಿ, ಬೆಂಗಳೂರು ರವರ ಪತ್ರದ ಸಂಖ್ಯೆ ಬೆ.ಜಿ.ಪಂ.ಆಡಳಿತ (ಗ್ರಾ) ಪಂಆ/107/2001-02, ದಿನಾಂಕ: 11.12.2003.
2) ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ರವರ ಪತ್ರದ ಸಂಖ್ಯೆ ಬಿ.ಎನ್.ಟಿ.ಎಲ್. ಎನ್.ಡಿ.ಸಿ.ಆರ್. 411/99-2000 ದಿನಾಂಕ: 21.9.2001.

ವಿಷಯಕ್ಕೆ ಸಂಬಂಧಿಸಿದಂತೆ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ ಸೋಮಶೆಟ್ಟಿ ಹಳ್ಳಿ ಗ್ರಾಮದ ಸರ್ವೆ ನಂ. 60 ರಲ್ಲಿ ಗುಂಡುತೋಪು ಜಮೀನಿನಲ್ಲಿ 1-20 ಗುಂಟೆ ಜಮೀನನ್ನು ಬೆಂಗಳೂರು ಉತ್ತರ ತಾಲ್ಲೂಕು ರವರು ಶಿಫಾರಸ್ಸಿನೊಂದಿಗೆ ಸಲ್ಲಿಸಿರುತ್ತಾರೆ.

ಸದರಿ ಜಮೀನು ಗುಂಡು ತೋಪು ಜಮೀನಾಗಿರುವುದರಿಂದ ಜಿಲ್ಲಾ ಪಂಚಾಯಿತಿ ಬೆಂಗಳೂರು ರವರಿಂದ ಪಡೆಯಲು ದಿನಾಂಕ: 19.12.2002 ರಂದು ಪತ್ರ ಬರೆಯಲಾಗಿರುತ್ತದೆ. ಅದರಂತೆ ಮುಖ್ಯ ಕಾರ್ಯ ನಿರ್ವಹಣಾ ಅಧಿಕಾರಿಗಳು, ಬೆಂಗಳೂರು ಜಿಲ್ಲಾ ಪಂಚಾಯಿತಿ, ಬೆಂಗಳೂರು ರವರು ಉಲ್ಲೇಖ (1) ರಂತೆ ಯಾವುದೇ ಆಕ್ಷೇಪಣೆಗಳು ಇರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಆದ್ದರಿಂದ ಸರ್ಕಾರಿ ಸುತ್ತೋಲೆ ನಂ. ಆರ್.ಡಿ. 250 ಎಲ್.ಜಿ.ಬಿ. 97 ದಿನಾಂಕ: 5.11.97 ರ ಪ್ರಕಾರ ಹಾಗೂ ಕರ್ನಾಟಕ ಭೂ ಕಂದಾಯ ಕಾಯ್ದೆ 1964 ರ ಕಲಂ 71 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಸೋಮಶೆಟ್ಟಿಹಳ್ಳಿ ಗ್ರಾಮದ ಸರ್ವೆ ನಂ. 60 ರಲ್ಲಿ 1-20 ಎಕರೆ ಗುಂಡುತೋಪು ಬಗ್ಗೆ ಸ್ಕೆಚ್‌ನಲ್ಲಿ ತೋರಿಸಿರುವಂತೆ 1-20 ಎಕರೆ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕೆ ಸ್ಮಶಾನಕ್ಕಾಗಿ ಕಾಯ್ದಿರಿಸಲಾಗಿದೆ.

ಪಿ.ಆರ್. 518 **ಜಿಲ್ಲಾಧಿಕಾರಿಗಳು**, ಬೆಂಗಳೂರು ಜಿಲ್ಲೆ, ಬೆಂಗಳೂರು

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

**ನಂ: ಕೆ.ಎಸ್.ಎ. ಸಿಆರ್ 26/2002-03, ದಿ: 28ನೇ ಜನವರಿ 2004**

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ಇರುವ ಮನೆಗಳು ಒತ್ತೊತ್ತಾಗಿದ್ದು, ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲೀ ಇರುವ ಗುಡಿಸಲುಗಳ ದುರಸ್ತಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ಜನಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯಕರ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಪ್ರಕಾರ ಹಾಗೂ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ, ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು 'ಕೊಳಚೆ ಪ್ರದೇಶ' ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಮತ್ತು ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

### ಷೆಡ್ಯೂಲ್

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯಲ್ಲಿ ಬರುವ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಮಾಳಗಾಳು, ಸ.ನಂ. 44, 45 ರಲ್ಲಿ ಪಟ್ಟೇಗಾರ್ ಪಾಳ್ಯದ ರಾಜೀವ್ ಗಾಂಧಿ ನಗರ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶವಾದ ಜಮೀನಿನ ಮಾಲೀಕರ ಹೆಸರು | ಸ.ನಂ. | ವಿಸ್ತೀರ್ಣ ಎ:ಗುಂ | ಚೆಕ್ಕು ಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
| 1 | ರಾಜೀವ್ ಗಾಂಧಿ ನಗರ ಕೊಳಚೆ ಪ್ರದೇಶ, ಪಟ್ಟೇಗಾರ್ ಪಾಳ್ಯ | 1. ಪಿಳ್ಳಮ್ಮ<br>2. ಕೆ.ಎಂ. ಚಂದ್ರಶೇಖರ್<br>3. ಕೆ.ಎಂ. ಜನಾರ್ಧನ್<br>4. ಸರ್ಕಾರಿ ಗುಂಡು ತೋಪು | 44ರ ಪೈಕಿ<br>45 | 0-23<br>0-14 | ಸರ್ಕಾರಿ ಕೆರೆ ಮತ್ತು ಖಾಸಗಿ ನಿವೇಶನ | ರಸ್ತೆ | ರಸ್ತೆ | ಖಾಸಗಿ ನಿವೇಶ ನಗಳು |
| | | | ಒಟ್ಟು | 0-37 | | | | |

**ಜಿ.ಎಸ್. ನಾರಾಯಣಸ್ವಾಮಿ**

ಪಿ.ಆರ್. 519 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001**

**ವಿಷಯ:** ಶ್ರೀ ಅಶೋಕ, ಗ್ರೂಪ್ 'ಡಿ' ನೌಕರ, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ರಾಯಚೂರು, ಇವರ ಅನುಚಿತ ದುರ್ನಡತೆ ಬಗ್ಗೆ.

**ಓದಲಾಗಿದೆ:**
1) ರಾಜ್ಯ ಆಯೋಗದ ಸಮಸಂಖ್ಯೆಯ ಆದೇಶ ದಿ: 31.3.2003.
2) ರಾಜ್ಯ ಆಯೋಗದ ಸಮಸಂಖ್ಯೆಯ ತಿಳುವಳಿಕೆ ದಿ: 16.6.2003.
3) ಶ್ರೀ ಅಶೋಕ್, ಗ್ರೂಪ್ 'ಡಿ' ನೌಕರರ ಮನವಿ (ರಾಜ್ಯ ಆಯೋಗಕ್ಕೆ ಸಲ್ಲಿಸಿರುವ ದಿನಾಂಕ: 5.9.2003.
4) ರಾಜ್ಯ ಆಯೋಗದ ಸಮಸಂಖ್ಯೆಯ ಆದೇಶ ದಿ: 19.9.2003.
5) ಇಲಾಖಾ ವಿಚಾರಣಾ ವರದಿ ದಿನಾಂಕ: 5.1.2004 (ಶ್ರೀ ಎ.ಆರ್. ಸಿದ್ದಿಕಿ, ಅಧ್ಯಕ್ಷರು ಮತ್ತು ವಿಚಾರಣಾಧಿಕಾರಿಗಳು, ಕೊಪ್ಪಳ ಜಿಲ್ಲಾ ವೇದಿಕೆ ಇವರು ಸಲ್ಲಿಸಿರುವ ದಿನಾಂಕ: 8.1.2004).
6) ರಾಜ್ಯ ಆಯೋಗದ ತಿಳುವಳಿಕೆ ದಿನಾಂಕ: 14.1.2004.
7) ಶ್ರೀ ಅಶೋಕ್, ಗ್ರೂಪ್ 'ಡಿ' ನೌಕರರ ಮನವಿ (ರಾಜ್ಯ ಆಯೋಗಕ್ಕೆ ದಿನಾಂಕ: 10.2.2004 ರಂದು ಸಲ್ಲಿಸಲ್ಪಟ್ಟಿರುತ್ತದೆ).
8) ರಾಯಚೂರು ಜಿಲ್ಲಾ ವೇದಿಕೆಯ ಪತ್ರ ಸಂಖ್ಯೆ: ಜಿಗ್ರಾವೇರಾ: 140:2003-04, ದಿನಾಂಕ: 8.3.2004 (ಶ್ರೀ ಅಶೋಕ್, ಗ್ರೂಪ್ 'ಡಿ' ಇವರ ಸೇವಾ ಪುಸ್ತಕದೊಂದಿಗೆ)
9) ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 19 ಸೇಇವಿ 2001, ದಿನಾಂಕ: 28.6.2001.
10) ಸರ್ಕಾರದ ಸುತ್ತೋಲೆ ಸಂಖ್ಯೆ ಸಿಆಸುಇ 18 ಸೇಇವಿ 2001 ದಿನಾಂಕ: 14.9.2001.

**ಪ್ರಸ್ತಾವನೆ:**

ರಾಯಚೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಗ್ರೂಪ್ 'ಡಿ' ನೌಕರರಾದ ಶ್ರೀ ಅಶೋಕ್ (ಅಶೋಕ ಲಕ್ಷ್ಮಣ), ಇವರು ದಿನಾಂಕ: 5.3.2003 ರಂದು ರಾಯಚೂರು ಜಿಲ್ಲಾ ವೇದಿಕೆಯ ಕರ್ತವ್ಯಕ್ಕೆ ತಡವಾಗಿ ಬಂದಿದ್ದೂ ಅಲ್ಲದೆ, ಕುಡಿದ ಅಮಲಿನಲ್ಲಿ ಸರ್ಕಾರಿ ನೌಕರರಿಗೆ ಶೋಭೆ ತರುವಂತಹದ್ದಲ್ಲದರ ರೀತಿಯಲ್ಲಿ ರಾಯಚೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರೊಂದಿಗೆ ವರ್ತಿಸಿ, ರಾಯಚೂರು ಜಿಲ್ಲಾ ವೇದಿಕೆಯ ಕಲಾಪಕ್ಕೆ ಅಡ್ಡಿಪಡಿಸಿ, ಜಿಲ್ಲಾ ವೇದಿಕೆಯ ಘನತೆ ಮತ್ತು ಗಾಂಭೀರ್ಯಕ್ಕೆ ಕುಂದುಂಟುಮಾಡಿದ್ದೂ ಅಲ್ಲದೆ, ಅದೇ ದಿನ ಸಂಜೆ 5.00 ಘಂಟೆಯ ಸಮಯದಲ್ಲಿ ಜಿಲ್ಲಾ ವೇದಿಕೆಯಲ್ಲಿರದೇ, ಸರ್ಕಾರಿ ನೌಕರಿಯಲ್ಲಿ ಆತನಿಗೆ ಸಂಪೂರ್ಣ ನೀತಿ, ನಿಷ್ಠೆ ಇಲ್ಲದಿರುವುದನ್ನು, ಕರ್ತವ್ಯ ನಿಷ್ಠೆಯನ್ನು ಪಾಲಿಸಿಕೊಂಡು ಬಾರದೇ ಇರುವುದನ್ನು, ಹಾಗೂ ಸರ್ಕಾರಿ ನೌಕರನು ಮಾಡುವುದು ಅನುಚಿತವೆಂದು ತೋರುವಂತಹ ಕೆಲಸವನ್ನು ಮಾಡಿದ್ದರ ಪ್ರಯುಕ್ತ, ರಾಯಚೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ದಿನಾಂಕ: 6.3.2003 ರ ಪತ್ರವನ್ನು ಅವಲೋಕಿಸಿಕೊಂಡು, ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾಗುವ ಆದೇಶದಡಿಯಲ್ಲಿ ಸದರಿ ನೌಕರರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವುದನ್ನು ಕಾಯ್ದಿರಿಸಿಕೊಂಡು ಅಮಾನತ್ತಿನಲ್ಲಿಡಲಾಗಿದೆ. ಸದರಿ ಅಮಾನತ್ತಿನ ಆದೇಶವನ್ನು ದಿನಾಂಕ: 3.4.2003ರ ಅಪರಾಹ್ನದಿಂದ ಸಂಬಂಧಪಟ್ಟ ನೌಕರರಿಗೆ ಜಾರಿಗೊಳಿಸಿದ್ದು, ಸದರಿ ನೌಕರರು ದಿನಾಂಕ: 3.4.2003ರ ಅಪರಾಹ್ನದಿಂದ ಅಮಾನತ್ತಿನಲ್ಲಿರುತ್ತಾರೆ.

ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾಗುವ ತಿಳುವಳಿಕೆಯ ಮೂಲಕ ಶ್ರೀ ಅಶೋಕ್ ಎಂಬ ಗ್ರೂಪ್ 'ಡಿ' ನೌಕರನಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 ರಡಿಯಲ್ಲಿನ ತಿಳುವಳಿಕೆ ಪಟ್ಟಿ, ಆರೋಪ ಪಟ್ಟಿ, ಆರೋಪಗಳನ್ನು ಸಾಬೀತುಪಡಿಸುವ ಪಟ್ಟಿ, ದಾಸ್ತಾವೇಜುಗಳ ಪಟ್ಟಿ ಹಾಗೂ ಸಾಕ್ಷಿಗಳ ಪಟ್ಟಿಯನ್ನು ಜಾರಿ ಮಾಡಿದ್ದು, ಸದರಿ ಆರೋಪಗಳನ್ನು ಅಲ್ಲಗಳೆಯುವಂತಹ ಯಾವುದೇ ದಾಖಲೆ ಅಥವಾ ಹೇಳಿಕೆಯನ್ನು ಸಂಬಂಧಪಟ್ಟ ನೌಕರರು ಸಲ್ಲಿಸದೇ ಇರುವುದರಿಂದ, ಶ್ರೀ ಅಶೋಕ್, ಗ್ರೂಪ್ 'ಡಿ' ನೌಕರರು, ಇವರು ದಿನಾಂಕ: 5.3.2003 ರಂದು ಅನುಚಿತವಾಗಿ ವರ್ತಿಸಿದ ದುರ್ನಡತೆಯು ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಾವಳಿಗಳು 1966ರ 3ನೇ ನಿಯಮದ 1ನೇ ಉಪನಿಯಮದ (i) (ii) (iii) ರಡಿ ದುರ್ನಡತೆಯಾಗಿದ್ದುದು ಮೇಲ್ನೋಟಕ್ಕೆ ಕಂಡುಬಂದಿದ್ದರ ಪ್ರಯುಕ್ತ ಇಲಾಖಾ ವಿಚಾರಣೆ ಆರಂಭಿಸಿ, ವಿಚಾರಣಾ ವರದಿ ಸಲ್ಲಿಸುವಂತೆ ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾಗುವ ದಿನಾಂಕ: 19.9.2003 ರ ಆದೇಶದಡಿಯಲ್ಲಿ ಕೊಪ್ಪಳ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರಾದ ಶ್ರೀ ಎ.ಆರ್. ಸಿದ್ದಿಕಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ, ಹಾಗೂ ಶ್ರೀ ಎ. ವಿಹಾರ್‌ಕುಮಾರ್,

ಶಿರಸ್ತೇದಾರರು, ಬಳ್ಳಾರಿ ಜಿಲ್ಲಾ ವೇದಿಕೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದ್ದು, ಶ್ರೀ ಎ.ಆರ್. ಸಿದ್ದಿಕಿ ಇವರು ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾಗುವ ವರದಿಯನ್ನು ಸಲ್ಲಿಸಿ, ಶ್ರೀ ಅಶೋಕ್ ಇವರು ಯಾವುದೇ ಭಯ, ಸಂಕೋಚ ಮತ್ತು ಪ್ರಚೋದನೆಯಿಲ್ಲದೇ, ದಿನಾಂಕ: 5.3.2003 ರಂದು ರಾಯಚೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗೆ ತಡವಾಗಿ ಬಂದಿರುವ, ಕುಡಿದ ಅಮಲಿನಲ್ಲಿ ಗಲಾಟೆ ಮಾಡಿರುವ, ಜಿಲ್ಲಾ ವೇದಿಕೆಯ ಕೋರ್ಟ್ ಹಾಲ್ ಆವರಣದಲ್ಲಿ ಅನುಚಿತವಾಗಿ ವರ್ತಿಸಿರುವ, ಹಾಗೂ ಸಂಜೆ 4.30 ಘಂಟೆಗೆ ಕಛೇರಿ ಬಿಟ್ಟಿರುವ ಆರೋಪಗಳನ್ನು ಸಂಪೂರ್ಣವಾಗಿ ಒಪ್ಪಿಕೊಂಡಿರುತ್ತಾರೆಂದು ತಿಳಿಸಿದ್ದನ್ನು, ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾಗುವ ತಿಳುವಳಿಕೆ ಮೂಲಕ ಸಂಬಂಧಿಸಿದ ನೌಕರರಿಗೆ ಜಾರಿ ಮಾಡಿಸಿದ್ದು, ಸದರಿ ನೌಕರರು ಕ್ರಮ ಸಂಖ್ಯೆ (7) ರಲ್ಲಿ ಓದಲಾಗುವ ಮನವಿಯ ಮೂಲಕ "ಸದರಿ ದಿನ ನಾನು ನೀಡಿರುವ ಹೇಳಿಕೆಯನ್ನು ಈಗಲೂ ಸಹ ಒಪ್ಪಿಕೊಂಡಿರುತ್ತೇನೆ. ಈ ವಿಚಾರಣೆಯಲ್ಲಿ ನಾನು ತಮಗೆ ತಿಳಿಸಬೇಕಾದ ಹೆಚ್ಚಿನ ಸಂಗತಿ ಯಾವುದೂ ಇರುವುದಿಲ್ಲ. ಖಾವಂದರವರು ದಯಮಾಡಿ ನನಗೆ ಗುಲ್ಬರ್ಗಾ ಅಥವಾ ಬಿಜಾಪುರ ಜಿಲ್ಲಾ ಗ್ರಾಹಕರ ವೇದಿಕೆಗೆ ಖಾಲಿ ಇರುವ ಜಾಗಕ್ಕೆ ನನಗೆ ನೇಮಕ ಮಾಡಬೇಕಾಗಿ ಕೋರಿಕೊಳ್ಳುತ್ತೇನೆ. ನಾನು ಅವಿದ್ಯಾವಂತನಾಗಿದ್ದು, ನನಗೆ ತಿಳಿಯದೆ ತಪ್ಪುಗಳಾಗಿದ್ದಲ್ಲಿ ಅವುಗಳನ್ನು ದಯಮಾಡಿ ಕ್ಷಮೆ ಮಾಡಿ ಇನ್ನು ಮುಂದೆಯಾದರೂ ಉತ್ತಮ ರೀತಿಯಲ್ಲಿ ನಾನು ಸರ್ಕಾರಿ ಸೇವೆಯನ್ನು ಮಾಡಲು ಅವಕಾಶವನ್ನು ಕಲ್ಪಿಸಿಕೊಡಬೇಕಾಗಿ" ಪ್ರಾರ್ಥಿಸಿರುವುದನ್ನು, ಹಾಗೂ ಸದರಿ ನೌಕರರ ಸೇವಾ ಪುಸ್ತಕ ಮತ್ತು ಕ್ರಮ ಸಂಖ್ಯೆ (9) ಮತ್ತು (10) ರಲ್ಲಿ ಓದಲಾಗುವ ಆದೇಶಗಳನ್ನು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 100 ಮತ್ತು ಕರ್ನಾಟಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 8 ರಡಿಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಮಾಡಲಾಗಿದೆ.

**ಆದೇಶ ಸಂಖ್ಯೆ: ಕರಾಆ/ಆಡಳಿತ/60/2002-03, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2004**

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷನಾದ ನಾನು ಶ್ರೀ ಟಿ. ಜಯರಾಮ ಚೌಟ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ಇಲಾಖಾ ಮುಖ್ಯಸ್ಥನಾಗಿರುವುದಲ್ಲದೇ, ಗ್ರೂಪ್ 'ಡಿ' ಹುದ್ದೆಯ ನೇಮಕಾತಿ ಪ್ರಾಧಿಕಾರ ಮತ್ತು ಶಿಸ್ತುಪ್ರಾಧಿಕಾರವಾಗಿರುವುದರಿಂದ, ನನಗೆ ಪ್ರದತ್ತವಾದ ಅಧಿಕಾರದನ್ವಯ, ಶ್ರೀ ಅಶೋಕ, ಇವರು ದಿನಾಂಕ: 5.3.2003 ರಂದು ಕುಡಿದ ಅಮಲಿನಲ್ಲಿ ರಾಯಚೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಗ್ರೂಪ್ 'ಡಿ' ಹುದ್ದೆಯ ಕರ್ತವ್ಯಕ್ಕೆ ಬಂದಿದ್ದೂ ಅಲ್ಲದೆ, ಜಿಲ್ಲಾ ವೇದಿಕೆಯ ಅಧ್ಯಕ್ಷರೊಂದಿಗೆ ಅನುಚಿತವಾಗಿ ವರ್ತಿಸಿ, ಜಿಲ್ಲಾ ವೇದಿಕೆಯ ಕೋರ್ಟ್ ಹಾಲ್ ಆವರಣದಲ್ಲಿ ಗದ್ದಲ ಮಾಡಿ, ವೇದಿಕೆಯ ಕಲಾಪ ಜರುಗಿಸುವುದಕ್ಕೆ ಅಡೆತಡೆ ಉಂಟುಮಾಡಿರುವುದು ಮತ್ತು ಸಂಜೆ ನಿಗದಿತ ಕಾಲಾವಧಿಯವರೆಗೆ ಜಿಲ್ಲಾ ವೇದಿಕೆಯಲ್ಲಿ ಹಾಜರಿರದೇ, ಜಿಲ್ಲಾ ವೇದಿಕೆಯಿಂದ ಹೊರಟುಹೋಗಿದ್ದು ನಿಸ್ಸಂಶಯವಾಗಿ ರುಜುವಾತಾಗಿರುವುದರಿಂದ, ಮತ್ತು ಸದರಿ ಆರೋಪವನ್ನು ಯಾವುದೇ ಭಯ, ಆತಂಕ ಅಥವಾ ಪ್ರಚೋದನೆ ಇಲ್ಲದಂತೆ ಒಪ್ಪಿಕೊಂಡಿರುವುದನ್ನು ಆರೋಪಿತ ನೌಕರನಾದ ಶ್ರೀ ಅಶೋಕ್ ಇವರು ದೃಢೀಕರಿಸಿರುವುದರಿಂದ, ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾಗುವ ಆದೇಶದಡಿಯಲ್ಲಿ ಶ್ರೀ ಅಶೋಕ, ಗ್ರೂಪ್ 'ಡಿ' ನೌಕರ, ರಾಯಚೂರು ಜಿಲ್ಲಾ ವೇದಿಕೆ, ಇವರನ್ನು ಅಮಾನತ್ತಿನಲ್ಲಿಟ್ಟಿದ್ದ ಆದೇಶವನ್ನು ಹಿಂತೆಗೆದುಕೊಳ್ಳಲಾಗಿದೆ. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8ರ (iii)ನೇ ಉಪ ನಿಯಮದಡಿಯಲ್ಲಿ **ಸದರಿ ನೌಕರರ ಒಂದು ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯಲಾಗಿದೆ** ಹಾಗೂ ಸದರಿ ನೌಕರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಬಾಗಲಕೋಟೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯಲ್ಲಿ ಖಾಲಿ ಇರುವ ಗ್ರೂಪ್ 'ಡಿ' ಹುದ್ದೆಗೆ ನೇಮಿಸಲಾಗಿದೆ. ಸದರಿ ನೌಕರರು ವರ್ಗಾವಣೆಯ ಪ್ರಯುಕ್ತ ಯಾವುದೇ ಪ್ರಯಾಣ ಭತ್ಯೆ ಮತ್ತು ಸೇರುವಿಕೆ ಕಾಲದ ಪ್ರಯೋಜನವನ್ನು ಪಡೆಯಲು ಅರ್ಹರಿರುವುದಿಲ್ಲ.

ಶ್ರೀ ಅಶೋಕ್ ಇವರು ದಿನಾಂಕ: 3.4.2003 ರ ಅಪರಾಹ್ನದಿಂದ ಮತ್ತು ಈ ಆದೇಶ ಜಾರಿಯಾಗಿ, ಸಂಬಂಧಪಟ್ಟ ನೌಕರರು ರಾಯಚೂರು ಜಿಲ್ಲಾ ವೇದಿಕೆಯ ಕರ್ತವ್ಯಕ್ಕೆ ಹಾಜರಾಗುವವರೆಗಿನ ಅಮಾನತ್ತಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 100(1)(ಬಿ) ರಡಿಯಲ್ಲಿ ಸದರಿ ನೌಕರರು ಕರ್ತವ್ಯದಲ್ಲಿ ಕಳೆದ ಅವಧಿಯಲ್ಲವೆಂದು ಪರಿಗಣಿಸಲಾಗಿದೆ.

ಪಿ.ಆರ್. 520

**ನ್ಯಾಯಮೂರ್ತಿ ಟಿ. ಜಯರಾಮ ಚೌಟ**
ಅಧ್ಯಕ್ಷರು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು, ಹಾಗೂ ಶಿಸ್ತು ಪ್ರಾಧಿಕಾರಿ ಮತ್ತು ನೇಮಕಾತಿ ಪ್ರಾಧಿಕಾರಿ, ಕರ್ನಾಟಕ
ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅ : ಕಾನಪ : 34:2004, ದಿನಾಂಕ: 22ನೇ ಮಾರ್ಚ್ 2004**

**ಅರ್ಜಿದಾರರು:**
ಅರ್ಚನಾ ಬೀಮಾಶಂಕರ ಉರ್ಫ್ ಬೀಮನ್ನಾ ಕೋಳಿ,
ವಾಸ: ತೊರವಿ ತಾಲ್ಲೂಕು : ಜಿಲ್ಲೆ : ಬಿಜಾಪುರ
(ಇತರೆ ಒಬ್ಬರು)

**ವಿರುದ್ಧ**

**ಪ್ರತಿವಾದಿಗಳು:**
1) ಮಿರ್. ಶಾಂತಮಲ ರಾಮಚಂದ್ರ ಶಿಂಗೆ, ವಾಸ: ಸಲಗಾರ ತಾ: ಅಕ್ಕಲಕೋಟ ಜಿಲ್ಲೆ: ಸೊಲ್ಲಾಪೂರ.
2) ದಿ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್, ಸೊಲ್ಲಾಪೂರ (ಬಿಜಾಪುರ) ಇವರ ಮುಖಾಂತರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಬೀಮಾ ಶಂಕರ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 27.1.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಅರ್ಚನಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಅರ್ಜಿ ಅಥವಾ ಆಕ್ಷೇಪಣೆಗಳು ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್. 521

ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅ : ಕಾನಪ : 43:2004, ದಿನಾಂಕ: 22ನೇ ಮಾರ್ಚ್ 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಮಲ್ಲಿಕಾರ್ಜುನ ಮಡವಾಲಪ್ಪಾ ಬಿರಾದಾರ
ವಾಸ: ಕನ್ನಲ ತಾ: ಬಿ. ಬಾಗೇವಾಡಿ
ಜಿಲ್ಲೆ: ಬಿಜಾಪುರ (ಹಾಗೂ ಇತರೆ 2 ಜನರು)

1. ಶಂಕರೆಪ್ಪಾ ಕಲ್ಲಪ್ಪಾ ಮಟ್ಟಿಯಾಲ
2. ಈರಪ್ಪಾ ಹಿಪ್ಪರಗಿ
3. ಸಿದ್ದಪ್ಪಾ ಬೀದರಕೋಟಿ, ಶ್ರೀಶೈಲ್ ಟ್ರೇಡಿಂಗ್ ಕಂಪನಿ ಆಯಿಲ್ ಮಿಲ್ ಹತ್ತಿರ, ಗಣಪತಿ ಚೌಕ್, ಬಿಜಾಪುರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸುವರ್ಣ ಉರ್ಫ್ ರೇಣುಕಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 17.2.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತಳ ಪತಿಯಾದ ಮಲ್ಲಿಕಾರ್ಜುನ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಅರ್ಜಿ ಅಥವಾ ಆಕ್ಷೇಪಣೆಗಳು ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಪಿ.ಆರ್. 522

**ಜಿ. ಸಿದ್ದಲಿಂಗಪ್ಪ ಆಲೂರು**

ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅ : ಕಾನಪ : 41 :2004, ದಿನಾಂಕ: 22ನೇ ಮಾರ್ಚ್ 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಸಿದ್ರಾಯಿ ಮಲ್ಲಪ್ಪಾ ಪೂಜಾರಿ ವಾಸ: ಹೊರ್ತಿ, ತಾ:
ಇಂಡಿ, ಜಿಲ್ಲೆ: ಬಿಜಾಪುರ (ಇತರೆ 5 ಜನರು)

1. ಅನ್ನಪ್ಪಾ ಮಲ್ಲಪ್ಪಾ ಸತಲಗಾಂವ, ವಾಸ: ಇಂಚಗೇರಿ, ತಾ: ಇಂಡಿ, ಜಿಲ್ಲೆ: ಬಿಜಾಪೂರ
2. ದಿ ಬ್ರ್ಯಾಂಚ್ ಮ್ಯಾನೇಜರ್, ನ್ಯಾಶನಲ್ ಇನ್ಸೂರೆನ್ಸ್ ಕಂ. ಲಿ. ಎಸ್.ಎಸ್. ಕ್ರಾಸ್ ರೋಡ್, ಬಿಜಾಪುರ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಹಣಮಂತ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 27.1.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ವಾರಸುದಾರರಾದ ಸಿದ್ರಾಯಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು

ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಅರ್ಜಿ ಅಥವಾ ಆಕ್ಷೇಪಣೆಗಳು ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಪಿ.ಆರ್. 523

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ

### ಪ್ರಕಟಣೆ

**ಮರಣ ಪ್ರಕರಣ ಸಂಖ್ಯೆ: ಕಾಅ : ಕಾನಪ : 35 :2004, ದಿನಾಂಕ: 22ನೇ ಮಾರ್ಚ್ 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಹಣೀಫಬೀ ಮೊಹಬೂಬಸಾಬ ಶೇಖ, ವಾಸ: ಬೇಕಿನಾಳಕರ ಬಿಲ್ಡಿಂಗ್, ಹವೇಲಿ ಗಲ್ಲಿ, ಬಿಜಾಪುರ

1. ಸದಾಶಿವ ಮೋನಾ ವೇಳಿ, ವಾಸ: ದೇವುಲೋ ಬಾದಲಪೂರ, ತಾ: ಉಲ್ಲಾಸನಗರ, ಜಿಲ್ಲೆ: ಠಾಣಾ
2. ದಿ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿಮಿಟೆಡ್, ಬಿಜಾಪುರ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಅಬ್ಬಾಸಲಿ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 25.5.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ವಾರಸುದಾರರಾದ ಹಣೀಪಬೀ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಅರ್ಜಿ ಅಥವಾ ಆಕ್ಷೇಪಣೆಗಳು ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಪಿ.ಆರ್. 524

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ

### ಪ್ರಕಟಣೆ

**ಮರಣ ಪ್ರಕರಣ ಸಂಖ್ಯೆ: ಕಾಅ : ಕಾನಪ : 39 :2004, ದಿನಾಂಕ: 22ನೇ ಮಾರ್ಚ್ 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಬೀಮವ್ವಾ ದ್ಯಾವಪ್ಪಾ ಬಿರಾದಾರ ವಾಸ: ಮನಗೂಲಿ, ತಾ: ಬಸವನ ಬಾಗೇವಾಡಿ ಜಿಲ್ಲೆ: ಬಿಜಾಪುರ, (ಇತರೆ ಇಬ್ಬರು ಜನರು)

1. ಮೋಹನ ಕೃಷ್ಣಾ ಕಲಾದಾಗಿ, ಮನೆ ನಂ. 65, ಸುಣಗಾರ ಗಲ್ಲಿ, ಬಿಜಾಪುರ.
2. ಬ್ರ್ಯಾಂಚ್ ಮ್ಯಾನೇಜರ್, ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ. ಬಿಜಾಪುರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ಯಾಂತಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 26.6.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಬೀಮವ್ವಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಅರ್ಜಿ ಅಥವಾ ಆಕ್ಷೇಪಣೆಗಳು ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಪಿ.ಆರ್. 525

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅ : ಕಾನಪ : 33 :2004, ದಿನಾಂಕ: 22ನೇ ಮಾರ್ಚ್ 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ಶ್ರೀಮತಿ ಶ್ಯಾಂತಮ್ಮಾ ಲಾಡಪ್ಪಾ ಮಾದರ
ವಾಸ: ಮೂಕಿಹಾಳ, ತಾ: ಮುದ್ದೇಬಿಹಾಳ, ಜಿಲ್ಲೆ:
ಬಿಜಾಪುರ (ಇತರೆ 5 ಜನರು)

1. ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಜಿಲ್ಲಾ ಪಂಚಾಯತ್ ಉಪ-ವಿಭಾಗ, ಮುದ್ದೇಬಿಹಾಳ, ಜಿಲ್ಲೆ ಬಿಜಾಪೂರ.
2. ಕಾರ್ಯನಿರ್ವಾಹಕ ಅಭಿಯಂತರರು, ಜಿಲ್ಲಾ ಪಂಚಾಯತ್, ಬಿಜಾಪೂರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಲಾಡಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 3.4.1996 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಶ್ಯಾಂತಮ್ಮಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಅರ್ಜಿ ಅಥವಾ ಆಕ್ಷೇಪಣೆಗಳು ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಪಿ.ಆರ್. 526

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಪ್ರಿಲಿಮಿನರಿ ಅಧಿಸೂಚನೆ**

**ನಂ: ಕೆ.ಎಸ್.ಎ. ಸಿಆರ್ 2/2003-04, ದಿ: 10ನೇ ಫೆಬ್ರವರಿ 2004**

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ಇರುವ ಮನೆಗಳು ಒತ್ತೊತ್ತಾಗಿದ್ದು, ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲೀ ಇರುವ ಗುಡಿಸಲು ದುರಸ್ತಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ಜನಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯಕರ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಪ್ರಕಾರ ಹಾಗೂ ವಿಶೇಷ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ವಿಶೇಷ ಜಿಲ್ಲಾಧಿಕಾರಿಗಳು ಬೆಂಗಳೂರು ಜಿಲ್ಲೆ, ಬೆಂಗಳೂರು ರವರು 'ಕೊಳಚೆ ಪ್ರದೇಶ' ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಮತ್ತು ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-20 ರವರಿಗೆ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಒಳಗಾಗಿ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ, ಬ್ಯಾಟರಾಯನಪುರ ನಗರಸಭೆ ವ್ಯಾಪ್ತಿಯಲ್ಲಿರುವ ರಾಮಚಂದ್ರಪುರ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಆಸ್ತಿ ಸಂಖ್ಯೆ | ವಿಸ್ತೀರ್ಣ (ಚ.ಅ) | ಚೆಕ್ಕು ಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ರಾಮಚಂದ್ರಪುರ ಕೊಳಚೆ | ದೊಡ್ಡನಂಜಪ್ಪ, ಎಂ. ನಂಜಪ್ಪ ನಗರಸಭೆ, ಬ್ಯಾಟರಾಯನಪುರ | ಗ್ರಾಮ ಠಾಣ | 0-26 | ರಾಮಚಂದ್ರ ಪುರ ಕೊಳಚೆ | ಸ.ನಂ. 29 | ಗ್ರಾಮ ಠಾಣದ ಉಳಿದ ಭಾಗ | ಸ.ನಂ. 29 |

**ಸಿ. ಕೃಷ್ಣೇಗೌಡ**

ಪಿ.ಆರ್. 527

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

**AEROSPACE DESIGN ENGINEERS PRIVATE LIMITED**
**Registered Office: No. 3, Airport Road, N.R. Colony, Murugeshapalya, Bangalore - 560 017**
**(Members Voluntary Winding up)**
**NOTICE**

Notice is hereby given that pursuant to Section 485 of the Companies Act, 1956 that the Members of the above Company held at an Extra Ordinary General Meeting held on Wednesday the 21st day of April 2004, resolved to windup the Company as "Members Voluntary Winding up" and appointed the undersigned as the Liquidator of the Company.

Place: Bangalore **B.S. Srinivasa Rao**
Date: 21.4.2004 Liquidator

**AEROSPACE DESIGN ENGINEERS PRIVATE LIMITED**
**Registered Office: No. 3, Airport Road, N.R. Colony, Murugeshapalya, Bangalore - 560 017**
**FORM NO. 151**
**[See Rule 315]**
**COMPANIES ACT, 1956**
**Members' (or Creditor's) Voluntary Winding-up**
**Notice of Appointment of Liquidator pursuant to section 516**

| | | |
|---|---|---|
| Name of Company | : | Aerospace Design Engineers Private Limited |
| Nature of Business | : | To carry on the business of designing of Aircrafts and Aerospace Vehicles, providing Technical Assistance and Know-how to the manufacturers of Aircraft. |
| Address of Registered Office | : | No. 3, Airport, N.R. Colony, Murugeshpalya, Bangalore-560 017. |
| Name(s) and address(es) of Liquidator(s) | : | B.S. Srinivasa Rao<br>No. 4, 1st Cross, Guptha Layout, (By the side of the Surana College) South End Road, Basavanagudi, Bangalore - 560 004. |
| Date of appointment | : | 21.4.2004 |
| By whom appointed | : | Members of the Company at the E.G.M. held on Wednesday the 21st April 2004 |

Place: Bangalore **B.S. Srinivasa Rao**
Date: 21.4.2004 Liquidator

**AEROSPACE DESIGN ENGINEERS PRIVATE LIMITED**
**Registered Office: No. 3, Airport Road, N.R. Colony, Murugeshapalya, Bangalore - 560 017**
**FORM NO. 152**
**[See Rule 315]**
**COMPANIES ACT, 1956**
**Members' (or Creditor's) Voluntary Winding-up**
**Notice of Appointment of Liquidator pursuant to section 516**

Name of Company : **Aerospace Design Engineers Private Limited**
Nature of Business :
Presented by : **Sri B.S. Srinivasa Rao, Liquidator**

To,
The Registrar of Companies
In Karnataka, Bangalore

I, B.S. Srinivasa Rao of Aerospace Design Engineers Private Limited, hereby give notice that I have been appointed liquidator(s) of Aerospace Design Engineers Private Limited by Special Resolution passed on 21st April 2004 by the Members of the Company.

**B.S. Srinivasa Rao**
Liquidator

**Note:** *State how appointed, whether by resolution of the company, creditors of the company, or how otherwise.

Place: Bangalore
Date: 21.4.2004
PD-28

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ನ್ಯಾಯಾಲಯ ಕಾರಣ ಕೇಳಿ ನೋಟೀಸ್

**ವಿಷಯ:** ಅಕ್ರಮವಾಗಿ ಸಾಗುವಳಿ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನ ಸಂಖ್ಯೆ: ಕೆಎ-27-3189 ಮಹೇಂದ್ರ ಮಿನಿ ಮ್ಯಾಕ್ಸಿ ಕ್ಯಾಬ್ ಅನ್ನು ವಶಕ್ಕೆ ತೆಗೆದುಕೊಂಡಿರುವ ಬಗ್ಗೆ.

**ಉಲ್ಲೇಖ:** 1) ಪೊಲೀಸ್ ಉಪನಿರೀಕ್ಷಕರು, ಅಪರಾಧ ವಿಭಾಗ, ಗ್ರಾಮಾಂತರ ಪೊಲೀಸ್ ಠಾಣೆ, ಚಿತ್ರದುರ್ಗ ಇವರ ಕಛೇರಿಯ ಅಪರಾಧ ಸಂಖ್ಯೆ: 193/03, ದಿನಾಂಕ: 4.6.03.

2) ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ ಇವರ ಪತ್ರ ಸಂಖ್ಯೆ: ವಅಅ-ಚಿದು-ಸಾಗುವಾನಿ-ವಶ-ಸಿಆರ್/2003-04/124 ದಿನಾಂಕ: 7.8.2003.

3) ಪ್ರಾದೇಶಿಕ ಸಾರಿಗೆ ಅಧಿಕಾರಿ, ಹಾವೇರಿ ಇವರು 'ಬಿ' ವಿವರ ನೀಡಿದ ಪತ್ರ ಸಂಖ್ಯೆ: ನೋಂದಣಿ-3ಎ-27/3/89/ಪ್ರಾಮಲಿ/ಹಾ/2003-04, ದಿನಾಂಕ: 11.8.03.

ಪೊಲೀಸ್ ಉಪ ನಿರೀಕ್ಷಕರು, ಅಪರಾಧ ವಿಭಾಗ, ಚಿತ್ರದುರ್ಗ ಇವರು ದಿನಾಂಕ: 4.6.03 ರಂದು ಬೆಳಿಗ್ಗೆ 11.15 ಗಂಟೆಗೆ ಚಿತ್ರದುರ್ಗ ಸ್ವಾತಿ ಹೋಟೆಲ್ ಮುಂದೆ ಇರುವ ರಾಷ್ಟ್ರೀಯ ಹೆದ್ದಾರಿ 4 ರಲ್ಲಿ ಗಸ್ತು ಮಾಡುತ್ತಿರುವಾಗ ಕೆಎ-27/3189 ಮಹೇಂದ್ರ ಮ್ಯಾಕ್ಸಿಕ್ಯಾಬ್ ಮತ್ತು ಸಾಗುವಾನಿ ಮರದ ತುಂಡುಗಳನ್ನು ವಶಪಡಿಸಿಕೊಂಡು ಗ್ರಾಮಾಂತರ ಪೊಲೀಸ್ ಠಾಣೆ, ಚಿತ್ರದುರ್ಗರವರು ಗುನ್ನೆ ಸಂಖ್ಯೆ: 193/03 ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆ ಕೈಗೊಂಡಿರುತ್ತಾರೆ. ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ 9 ಸಾಗುವಾನಿ ಮರದ ತುಂಡುಗಳನ್ನು ಹಾಗೂ ಸಾಗಿಸಲು ಉಪಯೋಗಿಸಿದ ಕೆಎ-27/3189 ಸಂಖ್ಯೆಯ ಮಹೇಂದ್ರ ಮ್ಯಾಕ್ಸಿಕ್ಯಾಬನ್ನು ಕರ್ನಾಟಕ ಅರಣ್ಯ ಕಾಯ್ದೆ-1963 ಕಲಂ 71(ಎ)ರ ಪ್ರಕಾರ ವಿಲೇ ಮಾಡಲು ಹಾಗೂ ಕ್ರಮ ಕೈಗೊಳ್ಳಲು ಈ ಪ್ರಾಧಿಕಾರಕ್ಕೆ ದಾಖಲೆಗಳೊಂದಿಗೆ ಮನವಿ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹಾವೇರಿ ಇವರಿಗೆ ಸದರಿ ವಾಹನದ ವಾರಸುದಾರರು ಯಾರೆಂಬ ಬಗ್ಗೆ ವರದಿ ಕೇಳಲಾಗಿ ಉಲ್ಲೇಖ (3) ರ ತಮ್ಮ ವರದಿಯಲ್ಲಿ ಮಹೇಂದ್ರ ಮ್ಯಾಕ್ಸಿಕ್ಯಾಬ್‌ನ ಮಾಲೀಕರು ಶ್ರೀ ಗಂಗಾಧರ ಶಂಕರಪ್ಪ ಬಿದರಣ್ಣವರ್ ಬಿನ್ ಶಂಕರಪ್ಪ (ವಾಹನದ ಚಾಲಕರು ಹಾಗೂ ಮಾಲೀಕರು) ಅಂಚಿಕಟ್ಟೆ ಗ್ರಾಮ, ಬೆಲಗಲ ಪೇಟೆ ಪೋಸ್ಟ್, ಹಾನಗಲ್ ತಾ: ಹಾವೇರಿ ಜಿಲ್ಲೆ ಇವರೆಂದು ವಿಳಾಸವನ್ನು ನೀಡಿದ ಪ್ರಯುಕ್ತ ಸರ್ಕಾರದ ಸ್ವತ್ತಾಗಿರುವ 9 ಸಾಗುವಾನಿ ಮರದ ತುಂಡುಗಳನ್ನು ಅಧಿಕೃತವಾಗಿ ಪರವಾನಿಗೆ ಇಲ್ಲದೆ ಸಾಗಣೆ ಮಾಡಿರುವುದರಿಂದ ಈ ಪ್ರಕರಣವು ಕರ್ನಾಟಕ ಅರಣ್ಯ ಕಾಯ್ದೆ - 1963 ರ ಸೆಕ್ಷನ್ 71 (ಎ) ರ ಪ್ರಕಾರ ಪರಿಗಣಿಸುವುದು ಸೂಕ್ತವೆಂದು ಸದರಿ 9 ಸಾಗುವಾನಿ ಮರದ ತುಂಡುಗಳನ್ನು ಅಕ್ರಮವಾಗಿ ಸಾಗಣೆ ಮಾಡುವ ಸಲುವಾಗಿ ಮಹೇಂದ್ರ ಮ್ಯಾಕ್ಸಿಕ್ಯಾಬನ್ನು ಉಪಯೋಗಿಸಿರುವುದರಿಂದ ವಾಹನ ಮತ್ತು ಅದರಲ್ಲಿದ್ದ 9 ಸಾಗುವಾನಿ ಮರದ ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ತಿಳಿದು ಉಲ್ಲೇಖ (4) ರಲ್ಲಿ ನಮೂದಿಸಿರುವ ಪತ್ರದಲ್ಲಿ ಕಾರಣ ಕೇಳಿ ನೋಟೀಸು ನೀಡಲಾಗಿತ್ತು. ಸದರಿ ಕಾರಣ ಕೇಳಿ ನೋಟೀಸಿನ ಮೇಲೆ ಅಂಚೆ ಇಲಾಖೆಯವರು ಮೇಲೆ ತಿಳಿಸಿರುವ ವಿಳಾಸದಾರರು ಪೌತಿಯಾಗಿರುವುದಾಗಿ ಈ ಪ್ರಾಧಿಕಾರದಿಂದ ಕಳುಹಿಸಲಾಗಿದ್ದ ನೋಟೀಸಿನ ಕವರ್ ಮೇಲೆ ಷರಾ ನಮೂದಿಸಿ ನೋಟೀಸನ್ನು ಹಿಂತಿರುಗಿಸಿರುತ್ತಾರೆ. ಈ ಪ್ರಕರಣದಲ್ಲಿ ಭಾಗಿಯಾಗಿರುವ ವಿಳಾಸದಾರರ ಬಗ್ಗೆ ನಿಖರವಾದ ಮಾಹಿತಿ ಇಲ್ಲದೆ ಇರುವುದರಿಂದ ಸದರಿ ವಿಳಾಸದಾರರ ವಾರಸುದಾರರು ಯಾರಾದರೂ ಇದ್ದಲ್ಲಿ ಮೇಲ್ಕಂಡ ವಾಹನಕ್ಕೆ ಸಂಬಂಧಿಸಿದ ಅವಶ್ಯಕವಾದ ದಾಖಲಾತಿಗಳೊಂದಿಗೆ ಈ ನೋಟೀಸು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆಗೊಂಡ ಹದಿನೈದು (15) ದಿನಗಳೊಳಗಾಗಿ ಈ ಪ್ರಾಧಿಕಾರಕ್ಕೆ ತಮ್ಮ ಅಹವಾಲುಗಳನ್ನು ಸಲ್ಲಿಸಲು ಈ ಮೂಲಕ ತಿಳಿಯಪಡಿಸಿದೆ.

ಈ ಪ್ರಕಟಣೆ ಪ್ರಕಟಿತಗೊಂಡ 15 ದಿನಗಳೊಳಗಾಗಿ ಯಾರು ತಮ್ಮ ಅಹವಾಲುಗಳನ್ನು ಸಲ್ಲಿಸದೆ ಇದ್ದ ಪಕ್ಷದಲ್ಲಿ ಸದರಿ ವಾಹನದ ವಾರಸುದಾರರು ಯಾರು ಇಲ್ಲವೆಂದು ಪರಿಗಣಿಸಿ ಕರ್ನಾಟಕ ಅರಣ್ಯ ಕಾಯ್ದೆ - 1963 ರ ಸೆಕ್ಷನ್ 71 (ಎ) ಪ್ರಕಾರ ಏಕ ಪಕ್ಷೀಯವಾಗಿ ಕ್ರಮ ಕೈಗೊಂಡು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

ಪಿ.ಆರ್. 565

## ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು
## ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅನ್ವಯ ಅಧಿಸೂಚನೆ
## ಕ್ರಮಾಂಕ: ಕಗೃಮಂ ಭೂಸ್ವಾವಿ.22/2003-04, ದಿನಾಂಕ: 10ನೇ ಮಾರ್ಚ್ 2004

ಈ ಅಧಿಸೂಚನೆಯಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ, ಕರ್ನಾಟಕ ಗೃಹ ಮಂಡಳಿಯ ಚಟುವಟಿಕೆಗಳಿಗೆ ಈ ಹಿಂದೆ ಭೂಸ್ವಾಧೀನವಾಗಿರುವ ಜಮೀನುಗಳಿಗೆ ರಸ್ತೆ ಸಂಪರ್ಕ ಒದಗಿಸಲು ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು, ರವರಿಗೆ ಕಂಡು ಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2) ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991ನೇ ಇಸವಿ ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ಕರ್ನಾಟಕ ಸರ್ಕಾರ ಭೂಸ್ವಾಧೀನ ಕಾಯ್ದೆ 5(ಎ) ವಿಧಿಯನ್ವಯ ಅಧಿಕಾರ ನೀಡಿರುವ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

ಈ ಭೂಮಿಯ ಸ್ವಾಧೀನ ಕೆಲಸ ನಿರ್ವಹಿಸಲು ಸರ್ಕಾರದಿಂದ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲಿ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಯಾ ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರ ಮಂಜೂರಾತಿಯನ್ನು ಪಡೆಯದೆಯೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಭಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು, ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಪರಿಶಿಷ್ಟ**

**ಜಿಲ್ಲೆ:** ಬೆಂಗಳೂರು **ತಾಲ್ಲೂಕು:** ಆನೇಕಲ್ **ಹೋಬಳಿ:** ಅತ್ತಿಬೆಲೆ **ಗ್ರಾಮ:** ಬನಹಳ್ಳಿ ಮತ್ತು ಚಂದಾಪುರ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಬೇಕಾದ ಜಮೀನಿನ ವಿಸ್ತೀರ್ಣ ಎ.ಗುಂ. | ಆಕಾರ ರೂ. ಪೈ. |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | | |
| 1 | 2 | 3 | 4 | 5 | 6 | 7 | 8 | 9 | 10 | 11 |
| | | | | | **ಬನಹಳ್ಳಿ** | | | | | |
| 1 | ಪಿಲ್ಲಯ್ಯ ಬಿನ್ ಸುಂಕಾರಪ್ಪ | ಪಿಲ್ಲಯ್ಯ | 1/1 ಪೈ | ಖುಷ್ಕಿ | 13/1 | 1/1ರ ಉಳಿಕೆ | 2 | 1/2 | 0-15 | 2-72 |
| 2 | ಕೊಂಡಯ್ಯ ಬಿನ್ ತಿಮ್ಮಯ್ಯ, ಚೌಡಯ್ಯ ಬಿನ್ ತಿಮ್ಮರೆಡ್ಡಿ,<br>ಟಿ ಮುನಿರೆಡ್ಡಿ ಬಿನ್ ತಿಮ್ಮರೆಡ್ಡಿ<br>ಟಿ. ವೆಂಕಟಸ್ವಾಮಿ ರೆಡ್ಡಿ ಬಿನ್ ತಿಮ್ಮರೆಡ್ಡಿ<br>ಗೌರಮ್ಮ ಕೋಂ ಲೇಟ್ ನಾರಾಯಣರೆಡ್ಡಿ<br>ಬಿ.ಎಂ. ವೆಂಕಟಸ್ವಾಮಿ ರೆಡ್ಡಿ ಬಿನ್ ಟಿ. ಮುನಿರೆಡ್ಡಿ | ಕೊಂಡಯ್ಯ, ಚೌಡಯ್ಯ,<br>ಟಿ ಮುನಿರೆಡ್ಡಿ<br>ಟಿ. ವೆಂಕಟಸ್ವಾಮಿ<br>ಗೌರಮ್ಮ | 1/2 ಪೈ | ಖುಷ್ಕಿ | 13/1 | 1/2 ರ ಉಳಿಕೆ | 1/1 | 1/3 | 0-04 | 2-47 |
| 3 | ಬಿ.ಎನ್. ಕೋದಂಡರಾಮಯ್ಯ<br>ಬಿ.ಎನ್. ಸುಬ್ಬಮ್ಮ<br>ಬಿ.ಎನ್. ರಾಮಕೃಷ್ಣಯ್ಯ,<br>ಬಿ.ಎನ್. ಶಿವರಾಮಯ್ಯ,<br>ಬಿಎನ್. ಶ್ರೀನಿವಾಸ,<br>ಬಿ. ಹನುಂತರಾವ್, ಬಿ.ಪಿ. ಸುಬ್ಬಣ್ಣ,<br>ಜಯರತ್ನಮ್ಮ ಕಮಲಮ್ಮ<br>ನಂಜುಂಡಯ್ಯ, ಕಮಲಮ್ಮ | ಬಿನ್.ಎನ್. ಕೋದಂಡರಾಮಯ್ಯ<br>ಬಿ.ಎನ್. ಸುಬ್ಬಮ್ಮ ಬಿ.ಎನ್. ರಾಮಕೃಷ್ಣಯ್ಯ, ಬಿ.ಎನ್. ಶಿವರಾಮಯ್ಯ, ಬಿ.ಎನ್. ಶ್ರೀನಿವಾಸ, ಬಿ.ಪಿ. ಸುಬ್ಬಣ್ಣ,<br>ಜಯರತ್ನಮ್ಮ ಕಮಲಮ್ಮ<br>ನಂಜುಂಡಯ್ಯ, ಬಿ.ಸಿ. ಭಾಗ್ಯಮ್ಮ<br>ಜಯರತ್ನಮ್ಮ, ವಿ.ಎಸ್. | 2 ಪೈ | ಖುಷ್ಕಿ | 2ರ ಉಳಿಕೆ | 2ರ ಉಳಿಕೆ | 113/2 | 1/1 | 0-28<br>0-02 ಖ | 11-15 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಬೇಕಾದ ಜಮೀನಿನ ವಿಸ್ತೀರ್ಣ ಎ.ಗುಂ. | ಆಕಾರ ರೂ. ಪೈ. |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | | |
| | ಬಿ.ಸಿ. ಭಾಗ್ಯಮ್ಮ ಜಯರತ್ನಮ್ಮ ಬಿನ್ ಮುನೇಗೌಡ, ವಿ.ಎಸ್. ಸಿದ್ದಲಿಂಗೇಶ್ವರ, ಕೆ. ರಘುರಾಮ ಬಿನ್ ಕೃಷ್ಣಾರೆಡ್ಡಿ, ಶ್ರೀರಾಮಯ್ಯ ಬಿನ್ ವೆಂಕಟಸ್ವಾಮಿ, ಮಲ್ಲಿಕಮ್ಮ ಕೋಂ ಶಿವಲಿಂಗಯ್ಯ ರಾಜಣ್ಣ ಬಿನ್ ಸಿದ್ದಲಿಂಗಪ್ಪ, ಬಿ. ವಿಮಲ ಕೋಂ ಮೌಳಿಗೇಶ್ವರ, ಎಸ್.ಟಿ. ರುಕ್ಮಿಣಿ ಬಿನ್ ಜವರೇಗೌಡ, ಎಸ್. ನಾಗರತ್ನ ಕೋಂ ಲೇಟ್ ಸೋಮಪ್ಪ, ಹೆಚ್.ಎಸ್. ನಂಜಪ್ಪ ಬಿನ್ ಲೇಟ್ ಎ. ಸಿದ್ದಲಿಂಗಪ್ಪ, ಹೆಚ್.ಎನ್. ಚಂದ್ರಶೇಖರ್ ಬಿನ್ ಹೆಚ್.ಎಸ್. ನಂಜಪ್ಪ, ಹೆಚ್.ಎನ್. ರಾಜಶೇಖರ್ ಬಿನ್ ಹೆಚ್.ಎಸ್. ನಂಜಪ್ಪ, ಹೆಚ್.ಎನ್. ಸುಜ್ಞಾನಪ್ರಭು ಬಿನ್ ಹೆಚ್.ಎಸ್. ನಂಜಪ್ಪ ಹೆಚ್.ಎನ್. ನಿರಂಜನಮೂರ್ತಿ ಬಿನ್ ಹೆಚ್.ಎಸ್. ನಂಜಪ್ಪ | ಸಿದ್ದಲಿಂಗೇಶ್ವರ, ಕೆ. ರಘುರಾಮ, ಶ್ರೀರಾಮಯ್ಯ, ಮಲ್ಲಿಕಮ್ಮ ರಾಜಣ್ಣ, ಬಿ. ವಿಮಲ, ಎಸ್.ಟಿ. ರುಕ್ಮಿಣಿ, ಹೆಚ್.ಎಸ್. ರಾಜಣ್ಣ, ಎಸ್. ನಾಗರತ್ನ | | | | | | | | |
| 4 | ಮುನಿರೆಡ್ಡಿ ಉ: ಬೋಡರೆಡ್ಡಿ | ಸುಂಕಾರೆಡ್ಡಿ | 7ಪೈ | ಖುಷ್ಕಿ | 8/1, 8/2 | 7ರ ಉಳಿಕೆ | 92 | 8/2 | 0-38 | 4-91 |
| 5 | ಎಂ. ಮುನಿಶಾಮಿರೆಡ್ಡಿ ಬಿನ್ ಮುನಿರೆಡ್ಡಿ, ಬಿ. ನಂಜಾರೆಡ್ಡಿ ಬಿನ್ ಮುಕ್ಕಡರೆಡ್ಡಿ | ಬಿ. ನಂಜಾರೆಡ್ಡಿ ಬಿನ್ ಮುಕ್ಕಡರೆಡ್ಡಿ | 8/2 ಪೈ | ಖುಷ್ಕಿ | 8/2ರ ಉಳಿಕೆ | 112/1 | 7 | 112/2 | 0-12 | 11-31 |
| 6 | ಟಿ. ಕೊಂಡಾರೆಡ್ಡಿ ಟಿ. ಮುನಿರೆಡ್ಡಿ | ಟಿ. ಕೊಂಡಾರೆಡ್ಡಿ ಟಿ. ಮುನಿರೆಡ್ಡಿ | 13/1 ಪೈ | ಖುಷ್ಕಿ | 13/1ರ ಉಳಿಕೆ | 1/1, 1/2 | 113/3 | 14/1 | 0-13 | 3-16 |
| 7 | ಬಿ.ಪಿ. ವೆಂಕಟರೆಡ್ಡಿ ಬಿನ್ ಪಿಲ್ಲಯ್ಯ ಬಿ.ಪಿ. ಜಯಪಾಲರೆಡ್ಡಿ ಬಿನ್ ಪಿಲ್ಲಯ್ಯ, ಪಿ. ಗೋಪಾಲರೆಡ್ಡಿ ಬಿನ್ ಪಿಲ್ಲಯ್ಯ, ಬಿ.ಪಿ. ನಾರಾಯಣ ರೆಡ್ಡಿ ಬಿನ್ ಪಿಲ್ಲಯ್ಯ | - | 14/1 ಪೈ | ಖುಷ್ಕಿ | 14/1ರ ಉಳಿಕೆ | 1/3, 1/4, 1/5 | 13/1 | 14/2 | 0-11 0-01 ಖ | 4-82 |
| 8 | ಬಿ. ಮುನಿರೆಡ್ಡಿ ಬಿನ್ ತಿಮ್ಮರಾಯಪ್ಪ | - | 14/2 ಪೈ | ಎನ್ಎಕೆ | 14/2ರ ಉಳಿಕೆ | 14/2ರ ಉಳಿಕೆ | 14/1 | 15 | 0-11 | 1-03 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | ಬೇಕಾದ ಜಮೀನಿನ ವಿಸ್ತೀರ್ಣ ಎ.ಗುಂ. | ಆಕಾರ ರೂ. ಪೈ. |
|---|---|---|---|---|---|---|---|---|---|---|
| 9 | ಪಿ. ರಾಮಯ್ಯ, ಲಕ್ಷ್ಮಣರೆಡ್ಡಿ, ಬಿ.ಪಿ. ರಾಮಚಂದ್ರರೆಡ್ಡಿ, ಬಿ.ಪಿ. ರವಿಕುಮಾರ್ | ಪಿ. ರಾಮಯ್ಯ, ಲಕ್ಷ್ಮಣರೆಡ್ಡಿ, ಬಿ.ಪಿ. ರಾಮಚಂದ್ರರೆಡ್ಡಿ, ಬಿ.ಪಿ. ರವಿಕುಮಾರ್ | 92 ಪೈ | ತರಿ | 7 | 92ರ ಉಳಿಕೆ | 102 | 7 | 0-05 | 2-21 |
| 10 | ಬಿ.ಎಂ. ರಾಮಸ್ವಾಮಿ ರೆಡ್ಡಿ ಬಿನ್ ಮುನಿರೆಡ್ಡಿ | ಬಿ.ಎಂ. ರಾಮಸ್ವಾಮಿ ರೆಡ್ಡಿ | 112/1 ಪೈ | ಖುಷ್ಕಿ | 112/1ರ ಉಳಿಕೆ | 112/1ರ ಉಳಿಕೆ | 7 | 113/2 | 0-05 | 7-88 |
| 11 | ಎಂ. ಮುನಿಶ್ಯಾಮಿರೆಡ್ಡಿ ಬಿನ್ ಮುಕ್ಕಡರೆಡ್ಡಿ | ಎಂ. ಮುನಿಶ್ಯಾಮಿರೆಡ್ಡಿ | 112/2 ಪೈ | ಖುಷ್ಕಿ | 112/2ರ ಉಳಿಕೆ 112/3 | 112/1 | 7 | 113/1 | 0-22 0-08 ಖ | 1-07 |
| 12 | ಮುನಿರೆಡ್ಡಿ ಉ: ಬೋಡರೆಡ್ಡಿ | ಬೋಡರೆಡ್ಡಿ | 112/3ಪೈ | ಖುಷ್ಕಿ | 112/3ರ ಉಳಿಕೆ | 112/2 | 8/2 | 113/1 | 0-06 0-01 ಖ | 1-24 |
| 13 | ಕೊಂಡಪ್ಪ ಬಿನ್ ತಿಮ್ಮಯ್ಯ | ಕೊಂಡಪ್ಪ | 113/1 ಪೈ | ಖುಷ್ಕಿ | 113/1ರ ಉಳಿಕೆ | 112/1 | 112/3 | 113/2 | 0-12 | 3-13 |
| | | | | | **ಚಂದಾಪುರ** | | | | | |
| 1 | ಎ. ವೆಂಕಟರಮಣ | ಎ. ವೆಂಕಟರಮಣ | 102 ಪೈ | ತರಿ | 102ರ ಉಳಿಕೆ | 102ರ ಉಳಿಕೆ | 104 | 92, 7 | 1-06 | 3-05 |
| 2 | ಎನ್. ನಾರಾಯಣ ರೆಡ್ಡಿ ಬಿನ್ ನಂಜುಂಡರೆಡ್ಡಿ | ಎನ್. ನಾರಾಯಣರೆಡ್ಡಿ | 103/1 ಪೈ | ತರಿ | 102 | 103/1ರ ಉಳಿಕೆ | ಹಳ್ಳ | 92 | 0-04 | 2-79 |
| 3 | ಎ. ವೆಂಕಟರಮಣ | ಎ. ವೆಂಕಟರಮಣ | 104 ಪೈ | ತರಿ | 104ರ ಉಳಿಕೆ | 171/1 ಹಳ್ಳ | ಎನ್. ಹೆಚ್. ರಸ್ತೆ | 103/1, 102 | 0-23 0-02 | 1-70 |
| 4 | ಕೆ. ಮುನಿರೆಡ್ಡಿ ಬಿನ್ ಕೊಂಡಾರೆಡ್ಡಿ | ಕೆ. ಮುನಿರೆಡ್ಡಿ | 171/1 ಪೈ | ತರಿ | 171/1ರ ಉಳಿಕೆ | 171/2 ಹಳ್ಳ | ಎನ್. ಹೆಚ್. ರಸ್ತೆ | ಹಳ್ಳ | 0-03 | 0-30 |
| 5 | ರಾಮರೆಡ್ಡಿ ಬಿನ್ ಯಲ್ಲಾರೆಡ್ಡಿ | ರಾಮರೆಡ್ಡಿ ವೈ. ಮುನಿರೆಡ್ಡಿ | 171/2 ಪೈ | ತರಿ | 171/1 | 171/2ರ ಉಳಿಕೆ | ಎನ್. ಹೆಚ್. ರಸ್ತೆ | ಹಳ್ಳ | 0-01 | 0-40 |
| | | | | | | | | ಒಟ್ಟು | 6-33 | |

ಪಿ.ಡಿ. 25

**ಗೃಹ ಆಯುಕ್ತರು,**
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ: 13/ಸಂವಿ/ಸಿ.ಓ.ಪಿ/2004, ದಿನಾಂಕ: 25ನೇ ಮಾರ್ಚ್ 2004**

ಬೆಂಗಳೂರು ನಗರ ಹೃದಯ ಭಾಗದಲ್ಲಿನ ಶೇಷಾದ್ರಿ ರಸ್ತೆ, ಕೆಂಪೇಗೌಡ ರಸ್ತೆ, ಪ್ಯಾಲೇಸ್ ರಸ್ತೆ, ಹಳೇ ಪೋಸ್ಟ್ ಆಫೀಸ್ ರಸ್ತೆ, ನೃಪತುಂಗ ರಸ್ತೆ ಮತ್ತು ಸುತ್ತಮುತ್ತಲಿನ ಅಡ್ಡ ರಸ್ತೆಗಳಲ್ಲಿ ಅನಿರೀಕ್ಷಿತವಾಗಿ ವಾಹನಗಳ ಸಂಚಾರ ಒತ್ತಡ ಅಧಿಕಗೊಂಡು ಸಂಚಾರ ಸ್ಥಗಿತಗೊಳ್ಳುವುದಲ್ಲದೆ ರಸ್ತೆ ಅಪಘಾತಗಳಿಗೂ ಕಾರಣವಾಗಿರುತ್ತದೆ. ಈ ರಸ್ತೆಗಳಲ್ಲಿ ಈ ಹಿಂದೆ ದಿನಾಂಕ: 24.10.2001 ರಂದು ಅಧಿಸೂಚನೆ ಸಂಖ್ಯೆ: ಟಿಆರ್/ಬಿಆರ್/ಸಿಓಪಿ/2001 ರಲ್ಲಿ ಮಾಡಲಾಗಿದ್ದ ಸಂಚಾರ ನಿರ್ಬಂಧನೆಗಳಲ್ಲಿ ಸಾರ್ವಜನಿಕ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕಾಗಿ ಕೆಲವು ಅಗತ್ಯ ಸಂಚಾರ ಮಾರ್ಪಾಡುಗಳನ್ನು ಮಾಡುವುದು ಅನಿವಾರ್ಯವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಶೇಷಾದ್ರಿ ರಸ್ತೆ, ಕೆಂಪೇಗೌಡ ರಸ್ತೆ, ಪ್ಯಾಲೇಸ್ ರಸ್ತೆ, ಹಳೇ ಪೋಸ್ಟ್ ಆಫೀಸ್ ರಸ್ತೆ, ನೃಪತುಂಗ ರಸ್ತೆಗಳಲ್ಲಿ ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಒಂದು ತಿಂಗಳ ಕಾಲ ಪ್ರಾಯೋಗಿಕವಾಗಿ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

1. ಕೆಂಪೇಗೌಡ ರಸ್ತೆ : ಕೆಂಪೇಗೌಡ ರಸ್ತೆಯಲ್ಲಿ ಪೊಲೀಸ್ ಕಾರ್ನರ್ ವೃತ್ತದಿಂದ ಮೈಸೂರು ಬ್ಯಾಂಕ್ ವೃತ್ತದವರೆವಿಗೆ ಪೂರ್ವದಿಂದ ಪಶ್ಚಿಮಕ್ಕೆ ಹಾಲಿ ಇರುವ ಸಂಚಾರ ವ್ಯವಸ್ಥೆಯನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ಮೈಸೂರ್ ಬ್ಯಾಂಕ್ ವೃತ್ತದಿಂದ ಪೊಲೀಸ್ ಕಾರ್ನರ್ ವೃತ್ತದ ಕಡೆಗೆ ಪಶ್ಚಿಮದಿಂದ ಪೂರ್ವಕ್ಕೆ ಸಂಚರಿಸುವ ಎಲ್ಲಾ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ.
2. ಶೇಷಾದ್ರಿ ರಸ್ತೆ : ಶೇಷಾದ್ರಿ ರಸ್ತೆಯಲ್ಲಿ ಆನಂದರಾವ್ ವೃತ್ತದಿಂದ ಮಹಾರಾಣಿ ಕಾಲೇಜ್ ವೃತ್ತದವರೆಗೆ ಇರುವ ಏಕಮುಖ ಸಂಚಾರ ವ್ಯವಸ್ಥೆಯನ್ನು ಕೆ.ಆರ್. ವೃತ್ತದವರೆಗೆ ವಿಸ್ತರಿಸಿ ಹಾಲಿ ಕೆ.ಆರ್. ವೃತ್ತದಿಂದ ಮಹಾರಾಣಿ ಕಾಲೇಜ್ ವೃತ್ತದ ಕಡೆಗೆ ಸಂಚರಿಸುವ ಎಲ್ಲಾ ವಿಧದ ವಾಹನ ಸಂಚಾರವನ್ನು ನಿಷೇಧಿಸಲಾಗಿದೆ.
3. ಪ್ಯಾಲೇಸ್ ರಸ್ತೆ : ಮಹಾರಾಣಿ ಕಾಲೇಜ್ ವೃತ್ತದಿಂದ ಮೈಸೂರ್ ಬ್ಯಾಂಕ್ ವೃತ್ತದವರೆವಿಗೆ ಅಂದರೆ ಉತ್ತರದಿಂದ ದಕ್ಷಿಣಕ್ಕೆ ಸಂಚರಿಸುವ ಎಲ್ಲಾ ವಾಹನಗಳ ಸಂಚಾರವನ್ನು ನಿಷೇಧಿಸಿ ಮೈಸೂರ್ ಬ್ಯಾಂಕ್ ವೃತ್ತದಿಂದ ಮಹಾರಾಣಿ ಕಾಲೇಜ್ ವೃತ್ತದವರೆಗೆ ವಾಹನಗಳ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ.
4. ಹಳೇ ಪೋಸ್ಟ್ ಆಫೀಸ್ ರಸ್ತೆ : ಈ ರಸ್ತೆಯಲ್ಲಿ ಕೆ.ಆರ್. ವೃತ್ತದಿಂದ ಮೈಸೂರ್ ಬ್ಯಾಂಕ್ ವೃತ್ತದವರೆಗೆ ಇರುವ ಏಕಮುಖ ಸಂಚಾರ ವ್ಯವಸ್ಥೆಯನ್ನು ರದ್ದುಪಡಿಸಿ ಬಿ.ಎಂ.ಟಿ.ಸಿ. ಮತ್ತು ಕೆ.ಎಸ್.ಆರ್.ಟಿ.ಸಿ. ವಾಹನಗಳ ಸಹಿತ ಇತರೆ ಎಲ್ಲಾ ತರಹದ ಭಾರೀ ಸರಕು ಸಾಗಣೆ ವಾಹನಗಳ ಸಂಚಾರವನ್ನು ನಿಷೇಧಿಸಿ ಲಘು ವಾಹನಗಳು, ದ್ವಿಚಕ್ರ ವಾಹನಗಳಿಗೆ ಎರಡೂ ಬದಿಯ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ.
5. ಕೆ.ಆರ್. ವೃತ್ತದ ಕಡೆಯಿಂದ ಪೊಲೀಸ್ ಕಾರ್ನರ್ ಕಡೆಗೆ ಬರುವ ವಾಹನಗಳು (ಬಿ.ಎಂ.ಟಿ.ಸಿ ಮತ್ತು ಕೆ.ಎಸ್.ಆರ್.ಟಿ.ಸಿ. ಬಸ್‌ಗಳು ಸೇರಿದಂತೆ) ಪೊಲೀಸ್ ಕಾರ್ನರ್‌ನಲ್ಲಿ ಮುಕ್ತ ಬಲತಿರುವನ್ನು ಪಡೆದು ಮೈಸೂರ್ ಬ್ಯಾಂಕ್ ವೃತ್ತದ ಕಡೆಗೆ ಚಲಿಸಬಹುದಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 10.4.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 25.3.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 493 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡವಳಿಕೆಗಳು**

**ನಂ. ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್: 9: 2002-2003, ದಿನಾಂಕ: 31ನೇ ಜನವರಿ 2004**

**ವಿಷಯ:** ಸಮಾಪನಾ ಆದೇಶಿತ ಬಿಲ್ ಒಡೆಯರಕೊಪ್ಪ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಸಿರಿಗೆರೆ ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ಆದೇಶ ಸಂ: ಡಿಆರ್‌ಎಸ್: ಎಲ್‌ಕ್ಯೂಡಿ: 9: 95-96: 1923: ದಿನಾಂಕ: 26.9.97.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ಸಂ: ಸನಿಶಿ-24: ಸಮಾಪನೆ: 2003-04: 1622: ದಿನಾಂಕ: 21.1.2004.

**ಪ್ರಸ್ತಾವನೆ:-**

ಬಿಲ್ ಒಡೆಯರ ಕೊಪ್ಪ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಸಿರಿಗೆರೆ ಶಿವಮೊಗ್ಗ ತಾಲ್ಲೂಕ್, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ರವರ ಕಾರ್ಯಾಲಯದ ಸಂ.ಎಆರ್‌ಎಸ್:316: 1966-67, ದಿನಾಂಕ: 16.2.1967 ರಲ್ಲಿ ನೋಂದಾಯಿಸಲ್ಪಟ್ಟಿರುತ್ತದೆ. ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ

ವ್ಯಾಪ್ತಿಯುಳ್ಳದ್ದಾಗಿದೆ. ಈ ಸಂಘವು 1997 ರಿಂದಲೂ ನಿಷ್ಕ್ರಿಯಗೊಂಡಿದ್ದು, ನೋಂದಾಯಿತ ಬೈಲಾದಲ್ಲಿಯ ಉದ್ದೇಶಗಳನ್ವಯ ಕಾರ್ಯನಿರ್ವಹಿಸದೇ ಇರುವ ಪ್ರಯುಕ್ತ, ಉಲ್ಲೇಖ (1) ರಲ್ಲಿಯ ಆದೇಶದಲ್ಲಿ ಸಮಾಪನೆಗೊಳಿಸಿ ಸಾಮಾನ್ಯ ನಿರೀಕ್ಷಕರು ಸಹಾಯಕ ನಿಬಂಧಕರ ಕಛೇರಿ ಶಿವಮೊಗ್ಗ ರವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ನಂತರ ಈ ಆದೇಶವನ್ನು ಮಾರ್ಪಡಿಸಿ ಸಮಸಂಖ್ಯೆಯ ಆದೇಶ ದಿನಾಂಕ: 23.6.2001 ರಲ್ಲಿ ಹಿರಿಯ ನಿರೀಕ್ಷಕರು ಸಿ.ಸಿ.ಸಿ. ಡಿಸಿಸಿ ಬ್ಯಾಂಕ್ ನಿ., ಶಿವಮೊಗ್ಗ ರವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ಸಮಾಪನಾಧಿಕಾರಿಯವರು, ಸಮಾಪನಾಧಿಕಾರಿಯಾಗಿ ಹುದ್ದೆಗೆ ದಿನಾಂಕ: 10.2.2000 ರಂದು ಹಾಜರಾಗಿರುತ್ತಾರೆ. ಆದರೆ ಈ ಸಂಘದ ಹಿಂದಿನ ಕಾರ್ಯದರ್ಶಿಯವರಿಂದ ಪೂರ್ಣ ಚಾರ್ಜ್ ಪಡೆಯಲು ಸಾಧ್ಯವಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಈ ಸಂಘದ ಲೆಕ್ಕ ಪರಿಶೋಧನೆಯಾದ ದಿನಾಂಕ: 31.3.94 ಕ್ಕೆ ಇದ್ದಂತೆ ವರದಿಯ ಆಧಾರದ ಮೇಲೆ ಆದ್ಯತಾ ಪಟ್ಟಿಯನ್ನು ಸಲ್ಲಿಸಿದ್ದು, ಈ ಕಛೇರಿಯಿಂದ ದಿನಾಂಕ: 21.1.2004 ರಂದು ಅನುಮೋದನೆ ಮಾಡಿ ಕೊಡಲಾಗಿದೆ. ಈ ಸಂಘದಲ್ಲಿನ ಸರ್ಕಾರದ ಸಾಲ ರೂ. 14,400.00 ಗಳನ್ನು ದಿನಾಂಕ: 10.7.90 ರಲ್ಲಿ ಬಡ್ಡಿ ಸಮೇತ ಪಾವತಿ ಮಾಡಿದ್ದು, ಸರ್ಕಾರದ ಷೇರು ಹಾಗೂ ಸಾಲ ಯಾವುದೂ ಬಾಕಿಯಿಲ್ಲವೆಂದು ವರದಿ ಮಾಡಿರುತ್ತಾರೆ. ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರಿಂದ ಬಾಕಿ ಇಲ್ಲವೆಂಬ ಬಗ್ಗೆ ದೃಢೀಕರಣ ಪಡೆದು ಸಲ್ಲಿಸಿರುತ್ತಾರೆ. ಈ ಸಂಘದಲ್ಲಿ ಚರಾಸ್ತಿ ಹಾಗೂ ಸ್ಥಿರಾಸ್ತಿ ಏನೂ ಇರುವುದಿಲ್ಲವೆಂದು ನಡುವಳಿಕೆ ಮೂಲಕ ವರದಿ ಮಾಡಿರುತ್ತಾರೆ. ಈ ಸಂಘಕ್ಕೆ ಸರ್ಕಾರದಿಂದ ಕಂದಾಯ ಇಲಾಖೆಯ ಮೂಲಕ ಯಾವುದೇ ಸ್ಥಿರಾಸ್ತಿ ಮಂಜೂರು ಮಾಡಿದ್ದಲ್ಲಿ ಸರ್ಕಾರಕ್ಕೆ ವಾಪಸ್ ಪಡೆಯಲು ಕೋರಿ, ತಹಶೀಲ್ದಾರ್ ಶಿವಮೊಗ್ಗ ರವರಿಗೆ ಪತ್ರ ಬರೆದಿರುವುದಾಗಿ ವರದಿ ಮಾಡಿರುತ್ತಾರೆ. ಈ ಸಂಘದಲ್ಲಿ ರೂ. 24,000.00 ಫಾರಂ ಹೌಸ್ ಎಂದು ಇದ್ದು, ಈ ಸ್ಥಿರಾಸ್ತಿಯನ್ನು ಸರ್ಕಾರಕ್ಕೆ ವಾಪಸ್ ಪಡೆಯಲು ತಹಶೀಲ್ದಾರ್ ರವರ ಮೂಲಕ ಜಿಲ್ಲಾಧಿಕಾರಿಯವರಿಗೆ ಶಿಫಾರಸ್ ಮಾಡಿರುವುದಾಗಿ ವರದಿ ಮಾಡಿರುತ್ತಾರೆ. ಈ ಸಂಘವು ನಷ್ಟದಲ್ಲಿರುವುದರಿಂದ ಸದಸ್ಯರ ಷೇರು ಬೆಲೆ ಶೂನ್ಯವಾಗಿದ್ದು, ಹೊಂದಾಣಿಕೆ ಲೆಕ್ಕ ಪತ್ರ ಮಾಡಿರುತ್ತಾರೆ. ಹಾಗೂ ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿ ಸಲ್ಲಿಸಿರುತ್ತಾರೆ. ಸಮಾಪನಾಧಿಕಾರಿಯವರು ದಿನಾಂಕ: 30.1.2004 ರಂದು ಅಂತಿಮ ನಡುವಳಿಕೆ ಮಾಡಿ, ನೋಂದಣಿ ರದ್ದತಿಗಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ ಮತ್ತು ಉಲ್ಲೇಖ (2) ರಲ್ಲಿಯ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಎಲ್ಲಾ ಹಿನ್ನೆಲೆಯಲ್ಲಿ ಮತ್ತು ಉಲ್ಲೇಖ (3) ರಲ್ಲಿಯ ಪತ್ರದ ಶಿಫಾರಸ್ಸು ಆಧಾರದ ಮೇಲೆ ಈ ಸಂಘದ ಅಸ್ತಿತ್ವದಿಂದ ಯಾವುದೇ ಪ್ರಯೋಜನ ಇಲ್ಲ ಎಂದು ದೃಢಪಟ್ಟಿದ್ದು, ಈ ಸಂಘದ ನೋಂದಣಿ ನಂ. ಎಆರ್‌ಎಸ್:316:66-67 ದಿನಾಂಕ: 16.2.1967 ನ್ನು ರದ್ದುಗೊಳಿಸುವುದು ಸೂಕ್ತ ಎಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ:69: ಸಿಎಲ್‌ಎಂ:2001 ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು, ಬಿಲ್ ಒಡೆಯರ್ ಕೊಪ್ಪ ಸಂಯುಕ್ತ ಬೇಸಾಯ ಸಹಕಾರ ಸಂಘ ನಿಯಮಿತ, ಸಿರಿಗೆರೆ ಶಿವಮೊಗ್ಗ ತಾಲ್ಲೂಕ್ ಇದರ ನೋಂದಣಿ ಸಂಖ್ಯೆ: ಎಆರ್‌ಎಸ್:316:66-67 ದಿನಾಂಕ: 16.2.1967ನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಈ ಸಂಘದ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿದೆ ಎಂದು ಹಾಗೂ ಈ ಸಂಘವು ಅಸ್ತಿತ್ವದಲ್ಲಿಲ್ಲವೆಂದು, ಈ ಸಂಘಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ 31ನೇ ಜನವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 494 **ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ.**

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡವಳಿಕೆಗಳು**

**ನಂ. ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್: 47 : 2002-2003, ದಿನಾಂಕ: 31ನೇ ಜನವರಿ 2004**

**ವಿಷಯ:** ಸಮಾಪನಾ ಆದೇಶಿತ ಸುಭಾಷ್‌ನಗರ ಬಳಕೆದಾರರ ಸಹಕಾರ ಸಂಘ ನಿಯಮಿತ, ಸಾಗರ, ಇದರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಆದೇಶ ಸಂ: ಡಿಆರ್‌ಎಸ್: ಕಾನೂನು-3: ಡಿಎಲ್‌ಎಸ್: 47: 2002-03, ದಿನಾಂಕ: 26.12.2002.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ರವರ ಪತ್ರ ಸಂ: ಎಆರ್-25: ಸಮಾಪನೆ : ನೋಂದಣಿ ರದ್ಧತಿ : 133: 2003-04: ದಿನಾಂಕ: 30.1.2004.

**ಪ್ರಸ್ತಾವನೆ:-**

ಸುಭಾಷ್‌ನಗರ ಬಳಕೆದಾರರ ಸಹಕಾರ ಸಂಘ ನಿಯಮಿತ, ಸಾಗರ, ಈ ಸಂಘವು ಸಾಗರ ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ಸಂಖ್ಯೆ: ಎಆರ್‌ಎಸ್:ಆರ್‌ಸಿಎಸ್:977:68-69, ದಿನಾಂಕ: 13.3.1969 ರಲ್ಲಿ ನೋಂದಾಯಿಸಲ್ಪಟ್ಟಿದ್ದು, ಕಾರ್ಯವ್ಯಾಪ್ತಿಯು ಸಾಗರ ಟೌನ್ 2ನೇ ಡಿವಿಜನ್ ವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಈ ಸಂಘವು 2001-2002ನೇ ಸಾಲಿನಿಂದ ನಿಷ್ಕ್ರಿಯಗೊಂಡಿದ್ದು, ನೋಂದಾಯಿತ ಬೈಲಾದಲ್ಲಿಯ ಉದ್ದೇಶಗಳನ್ವಯ ಕಾರ್ಯನಿರ್ವಹಿಸದೇ ಇರುವ ಪ್ರಯುಕ್ತ, ಉಲ್ಲೇಖ (1) ರಲ್ಲಿಯ ಆದೇಶದಲ್ಲಿ ಸಮಾಪನೆಗೊಳಿಸಿ, ನಿರೀಕ್ಷಕರು, ಸಹಾಯಕ ನಿಬಂಧಕರ ಕಛೇರಿ, ಸಾಗರ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕಗೊಳಿಸಿದ್ದು, ಸಮಾಪನಾಧಿಕಾರಿಯವರು ದಿನಾಂಕ: 28.2.2003 ರಂದು ಪ್ರಭಾರ ವಹಿಸಿಕೊಂಡಿರುತ್ತಾರೆ.

ಸಮಾಪನಾಧಿಕಾರಿಯವರು ಈ ಸಂಘದಲ್ಲಿ ಚರಾಸ್ತಿಗಳನ್ನು ವಿಲೇವಾರಿ ಮಾಡಿದ್ದು, ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಷೇರು ಅಥವಾ ಸರ್ಕಾರದ ಸಾಲ ಏನೂ ಇರುವುದಿಲ್ಲವೆಂದು ಮತ್ತು ಸಂಘದ ಹೆಸರಿನಲ್ಲಿ ಯಾವುದೇ ಸ್ಥಿರಾಸ್ತಿ ಇರುವುದಿಲ್ಲವೆಂದು ದೃಢೀಕರಿಸಿ ನಡವಳಿಕೆ ಮಾಡಿರುತ್ತಾರೆ. ಈ ಸಂಘವು ನಷ್ಟವನ್ನು ಅನುಭವಿಸುತ್ತಿರುವುದರಿಂದ, ಸದಸ್ಯರ ಷೇರು ಮೌಲ್ಯ ಶೂನ್ಯವಾಗಿದ್ದು, ಸದಸ್ಯರಿಗೆ ಷೇರು ಹಂಚುವ ಪ್ರಶ್ನೆ ಇರುವುದಿಲ್ಲವೆಂದು ನಡವಳಿಕೆ ಮೂಲಕ ಸಲ್ಲಿಸಿರುತ್ತಾರೆ. ಈ ಸಂಘದ ನೋಂದಣಿ ರದ್ದುಪಡಿಸುವ ಸಂಬಂಧ ಸದಸ್ಯರ ಆಕ್ಷೇಪಣೆ ಇದ್ದಲ್ಲಿ ವಿವರಣೆ ಕೇಳಿ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಣೆಗೊಳಿಸಿರುತ್ತಾರೆ. ಆದರೆ ಆಕ್ಷೇಪಣೆಗಳು ಯಾರಿಂದಲೂ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಸಮಾಪನಾಧಿಕಾರಿಯವರು ದಿನಾಂಕ: 28.1.2004 ರಂದು ಅಂತಿಮ ನಡವಳಿಕೆ ಮೂಲಕ ಈ ಸಂಘದ ನೋಂದಣಿ ರದ್ದತಿಗಾಗಿ ಪ್ರಸ್ತಾವನೆಯನ್ನು ಉಲ್ಲೇಖ (2) ರಲ್ಲಿಯ ಪತ್ರದ ಮೂಲಕ ಸಲ್ಲಿಸಿರುತ್ತಾರೆ.

ಈ ಎಲ್ಲಾ ಹಿನ್ನೆಲೆಯಲ್ಲಿ ಮತ್ತು ಉಲ್ಲೇಖ (2) ರಲ್ಲಿಯ ಪತ್ರದ ಶಿಫಾರಸ್ ಆಧಾರದ ಮೇಲೆ ಈ ಸಂಘದ ಅಸ್ತಿತ್ವದಿಂದ ಯಾವುದೇ ಪ್ರಯೋಜನವಿಲ್ಲ ಎಂದು ದೃಢಪಟ್ಟಿದ್ದು, ಈ ಸಂಘದ ನೋಂದಣಿ ಸಂಖ್ಯೆ ರದ್ದುಗೊಳಿಸುವುದು ಸೂಕ್ತ ಎಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

## ಆದೇಶ

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ:69:ಸಿಎಲ್ಎಂ: 2001: ದಿನಾಂಕ: 21.11.2001 ರಲ್ಲಿಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು, ಸುಭಾಷ್‌ನಗರ ಬಳಕೆದಾರರ ಸಹಕಾರ ಸಂಘ ನಿಯಮಿತ, ಸಾಗರ, ಇದರ ನೋಂದಣಿ ಸಂಖ್ಯೆ: ಎಆರ್ಎಸ್:ಆರ್‌ಸಿಎಸ್:977:68-69:ದಿನಾಂಕ: 13.3.1969, ಇದನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಈ ಸಂಘದ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿದೆ ಎಂದು ಹಾಗೂ ಈ ಸಂಘವು ಅಸ್ತಿತ್ವದಲ್ಲಿಲ್ಲವೆಂದು, ಈ ಸಂಘಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ, ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ 31ನೇ ಜನವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 495 **ಕೆ. ಈಶ್ವರಸ್ವಾಮಿ**

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಸಹಕಾರ ಇಲಾಖೆ

### ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡವಳಿಕೆಗಳು

### ನಂ. ಡಿಆರ್ಎಸ್:ಕಾನೂನು-3:ಡಿಎಲ್ಎಸ್: 28 : 2002-2003, ದಿನಾಂಕ: 28ನೇ ಫೆಬ್ರವರಿ 2004

**ವಿಷಯ:** ಸಮಾಪನಾ ಆದೇಶಿತ ಸೀ ಐಲ್ಯಾಂಡ್ ಹತ್ತಿ ಬೆಳೆಗಾರರ ಸಹಕಾರ ಸಂಘ ನಿಯಮಿತ, ಶಿರಾಳಕೊಪ್ಪ, ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ಆದೇಶ ಸಂ: ಡಿಆರ್ಎಸ್: ಎಲ್‌ಕ್ಯೂಡಿ: 55: 84-85: ದಿನಾಂಕ: 20.2.1985 ಹಾಗೂ ದಿನಾಂಕ: 31.12.96.

**ಪ್ರಸ್ತಾವನೆ:-**

ಸೀ ಐಲ್ಯಾಂಡ್ ಹತ್ತಿ ಬೆಳೆಗಾರರ ಸಹಕಾರ ಸಂಘ ನಿಯಮಿತ, ಶಿರಾಳಕೊಪ್ಪ, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ಸಂಖ್ಯೆ: 1845, ದಿನಾಂಕ: 14.8.72 ರಲ್ಲಿ ನೋಂದಾಯಿಸಲ್ಪಟ್ಟಿದ್ದು, ಇದರ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ನೋಂದಾಯಿತ ಬೈಲಾದಲ್ಲಿಯ ನಿಬಂಧನೆಗಳ ಪ್ರಕಾರ ಕಾರ್ಯ ನಿರ್ವಹಿಸುತ್ತಿಲ್ಲವೆಂದು ಉಲ್ಲೇಖಿತ ಆದೇಶ ದಿನಾಂಕ: 20.2.1985 ರಲ್ಲಿ ಸಮಾಪನೆಗೊಳಿಸಿ ಆದೇಶಿಸಿದೆ. ಈ ಆದೇಶದಲ್ಲಿ ಸಹಕಾರ ವಿಸ್ತರಣಾಧಿಕಾರಿ, ಶಿಕಾರಿಪುರ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕಮಾಡಿದ್ದು, ನಂತರ ದಿನಾಂಕ: 31.12.96ರ ಆದೇಶದಲ್ಲಿ ಬದಲಾವಣೆ ಮಾಡಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಶಿಕಾರಿಪುರ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 27.3.2002 ರಂದು ಪ್ರಭಾರ ವಹಿಸಿಕೊಂಡಿದ್ದು, ನಗದುಪುಸ್ತಕ ಮಾತ್ರ ದೊರೆತ ಪ್ರಯುಕ್ತ, ಆಡಿಟ್ ಆದ ದಿನಾಂಕ: 31.3.97 ರ ಆಸ್ತಿ ಜವಾಬ್ದಾರಿ ಆಧಾರಿತವಾಗಿ ದಿನಾಂಕ: 31.12.2003 ರಂದು ಅಂತಿಮ ನಡವಳಿಕೆ ನಡೆಸಿ, ಲೆಕ್ಕ ಹೊಂದಾಣಿಕೆ ಮಾಡಿ, ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿ ವರದಿ ಮಾಡಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಏನೂ ಇರುವುದಿಲ್ಲವೆಂದು ಮತ್ತು ಈ ಸಂಘದ ಹೆಸರಿನಲ್ಲಿ ಯಾವುದೇ ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿರುತ್ತಾರೆ. ಈ ಸಂಘದಲ್ಲಿ ದಿನಾಂಕ: 30.6.83 ರ ಆಡಿಟ್ ವರದಿಯಂತೆ, ವಸೂಲಾಗಬೇಕಾದ ಆಸ್ತಿ ಹಣ, ಜವಾಬ್ದಾರಿ ಕಡೆ ಇದ್ದು, ಹೊಂದಾಣಿಕೆ ಮಾಡಿ ವರದಿ ಸಲ್ಲಿಸಿರುತ್ತಾರೆ. ಹಾಗೂ ಹಣ ದುರುಪಯೋಗವಿಲ್ಲವೆಂದು ವರದಿ ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಮತ್ತು ಉಲ್ಲೇಖ (2) ರಲ್ಲಿಯ ಶಿಫಾರಸ್ ಆಧಾರದ ಮೇರೆಗೆ ಈ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ, ಈ ಸಂಘದ ನೋಂದಣಿ ನಂ. ಎಆರ್ಎಸ್:848:72-73: ದಿನಾಂಕ: 18.8.1972ನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯ್ಯೂ:69:ಸಿಎಲ್‌ಎಂ: 2001: ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರದಂತೆ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು, ಸೀ ಐಲೆಂಡ್ ಹತ್ತಿ ಬೆಳೆಗಾರರ ಸಹಕಾರ ಸಂಘ ನಿಯಮಿತ, ಶಿರಾಳಕೊಪ್ಪ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇದರ ನೋಂದಣಿ ಸಂಖ್ಯೆ: ಎಆರ್‌ಎಸ್:848:72-73:ದಿನಾಂಕ: 18.8.1972 ನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಈ ಸಂಘದ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿದೆ ಎಂದು ಹಾಗೂ ಈ ಸಂಘವು ಅಸ್ತಿತ್ವದಲ್ಲಿಲ್ಲವೆಂದು ಆದೇಶಿಸಿದೆ. ಈ ಸಂಘಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ, ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 28ನೇ ಫೆಬ್ರವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 496

**ಕೆ. ಈಶ್ವರಸ್ವಾಮಿ**

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ನಡವಳಿಕೆಗಳು**

**ನಂ. ಡಿಆರ್‌ಎಸ್:ಕಾನೂನು-3:ಡಿಎಲ್‌ಎಸ್: 7 : 2003-2004, ದಿನಾಂಕ: 28ನೇ ಫೆಬ್ರವರಿ 2004**

**ವಿಷಯ:** ಸಮಾಪನೆ ಆದೇಶಿತ ಗಾಂಧಿನಗರ ಪ್ರಾಥಮಿಕ ಬಳಕೆದಾರರ ಸಹಕಾರ ಸಂಘ ನಿ., ಶಿವಮೊಗ್ಗ ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1) ಸ. ಸಂ. ಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಸಮ ಸಂಖ್ಯೆಯ ಆದೇಶ ದಿನಾಂಕ: 30.6.2003.

2) ಸ. ಸಂ. ಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ನಂ. ಎಆರ್-24: ಸಮಾಪನೆ: ಸಿಆರ್. 56: 02-03: ದಿ: 23.9.2003.

3) ಸಮಾಪನಾಧಿಕಾರಿಯವರ ಪತ್ರ ನಂ. ಸಿ.ಆ:11:ಸಮಾಪನೆ: 1666:03-04: ದಿನಾಂಕ: 3.2.2004.

**ಪ್ರಸ್ತಾವನೆ:-**

ಗಾಂಧಿನಗರ ಪ್ರಾಥಮಿಕ ಬಳಕೆದಾರರ ಸಹಕಾರ ಸಂಘ ನಿ., ಶಿವಮೊಗ್ಗ ಈ ಸಂಘವು ಶಿವಮೊಗ್ಗ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ಸಂಖ್ಯೆ: ಎಆರ್‌ಎಸ್: 10254: 83-84: ದಿನಾಂಕ: 27.12.03 ರಲ್ಲಿ ನೋಂದಾಯಿಸಲ್ಪಟ್ಟಿದೆ. ಈ ಸಂಘದ ಕಾರ್ಯ ವ್ಯಾಪ್ತಿಯ ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇರುತ್ತದೆ. ಈ ಸಂಘವು ನೋಂದಾಯಿತ ಬೈಲಾದಲ್ಲಿಯ ಉದ್ದೇಶಗಳನ್ವಯ ಕಾರ್ಯನಿರ್ವಹಿಸದೇ, ಸಂಘದ ಚಟುವಟಿಕೆಗಳನ್ನು ಸ್ಥಗಿತಗೊಳಿಸಿದ ಪ್ರಯುಕ್ತ ಉಲ್ಲೇಖ 1 ರಲ್ಲಿಯ ಆದೇಶದಲ್ಲಿ ಸಮಾಪನೆಗೊಳಿಸಿ ಆದೇಶಿಸಿದೆ. ಹಾಗೂ ಶ್ರೀ ಎಸ್.ಹೆಚ್. ಷರೀಫ್, ಹಿರಿಯ ನಿರೀಕ್ಷಕರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿದೆ. ಸಮಾಪನಾಧಿಕಾರಿಯವರು ದಿನಾಂಕ: 17.2.2003 ರಂದು ಅಧಿಕಾರ ವಹಿಸಿಕೊಂಡಿರುತ್ತಾರೆ. ಈ ಸಂಘವು ಲೆಕ್ಕಪತ್ರಗಳು ದೊರೆಯದ ಪ್ರಯುಕ್ತ ಆಡಿಟ್ ಆದ 1997-98ನೇ ಸಾಲಿನ ಆಡಿಟ್ ವರದಿಯ ಆಧಾರಿತವಾಗಿ ಸಮಾಪನಾಧಿಕಾರಿಯವರು ಲೆಕ್ಕಹೊಂದಾಣಿಕೆ ಮಾಡಿ ದಿನಾಂಕ: 26.8.2003 ರಂದು ಅಂತಿಮ ನಡವಳಿಕೆ ನಡೆಸಿ ನೋಂದಣಿ ರದ್ದತಿಗೆ ಕೋರಿರುತ್ತಾರೆ. ಈ ಸಂಘದಲ್ಲಿ ಸ್ಥಿರಾಸ್ತಿ ಇರುವುದಿಲ್ಲ; ಸರ್ಕಾರದ ಷೇರು ಮತ್ತು ಸರ್ಕಾರದ ಸಾಲ ಯಾವುದೂ ಬಾಕಿ ಇರುವುದಿಲ್ಲ; ಚರಾಸ್ತಿಗಳಿಗೆ ವಿವರ ಇರುವುದಿಲ್ಲವೆಂದು ಸಮಾಪನಾಧಿಕಾರಿಯವರು ವರದಿ ಮಾಡಿ ಲೆಕ್ಕಹೊಂದಾಣಿಕೆ ಮಾಡಿ ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಈ ಸಂಘವು ನಷ್ಟದಲ್ಲಿರುವುದರಿಂದ ಷೇರು ಮೌಲ್ಯ ಶೂನ್ಯವಾಗಿದ್ದು, ಷೇರು ಹಂಚಲು ಬರುವುದಿಲ್ಲವೆಂದು ನಡುವಳಿಕೆ ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಮತ್ತು ಉಲ್ಲೇಖ (2) ರಲ್ಲಿಯ ಪತ್ರದನ್ವಯ ಈ ಸಂಘವನ್ನು ಮುಂದುವರಿಸುವುದರಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಪ್ರಯೋಜನ ಇಲ್ಲದ ಪ್ರಯುಕ್ತ ಈ ಸಂಘದ ನೋಂದಣಿ ಸಂಖ್ಯೆ: ಡಿಆರ್‌ಎಸ್: 10254: 83-84: ದಿನಾಂಕ: 27.12.83 ರನ್ನು ರದ್ದುಪಡಿಸುವುದು ಅವಶ್ಯಕವೆಂದು ಮನಗಂಡು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯ್ಯೂ:69:ಸಿಎಲ್‌ಎಂ: 2001: ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರದನ್ವಯ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು, ಗಾಂಧಿನಗರ ಪ್ರಾಥಮಿಕ ಬಳಕೆದಾರರ ಸಹಕಾರ ಸಂಘ ನಿ., ಶಿವಮೊಗ್ಗ ಇದರ ನೋಂದಣಿ ನಂ. ಎಆರ್‌ಎಸ್:10254:83-84: ದಿನಾಂಕ: 27.12.83 ನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಈ ಸಂಘದ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿದೆ ಎಂದು ಹಾಗೂ ಈ ಸಂಘವು ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ದೃಢೀಕರಿಸಿದೆ. ಈ ಸಂಘಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 28ನೇ ಫೆಬ್ರವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 497

**ಕೆ. ಈಶ್ವರಸ್ವಾಮಿ**

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡವಳಿಕೆಗಳು**

**ನಂ. ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್: 55 : 2003-2004, ದಿನಾಂಕ: 31ನೇ ಜನವರಿ 2004**

**ವಿಷಯ:** ನಿಷ್ಕ್ರಿಯಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಾನ್ಲೆ ಸಾಗರ ತಾಲ್ಲೂಕ್ ಇದರ ಸಮಾಪನೆ ಬಗ್ಗೆ.

**ಉಲ್ಲೇಖ:** ಸ.ಸಂ. ಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಇವರ ಪತ್ರ ಸಂ. ಎಆರ್-25:ಸಮಾಪನೆ: 4401:2003-04: ದಿನಾಂಕ: 28.1.2004.

**ಪ್ರಸ್ತಾವನೆ:-**

ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಕಾನ್ಲೆ ಸಾಗರ ತಾಲ್ಲೂಕ್, ಈ ಸಂಘವು ಸಾಗರ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ಸಂಖ್ಯೆ: 16313:90-91, ದಿನಾಂಕ: 18.1.91 ರಲ್ಲಿ ನೋಂದಣಿಯಾಗಿದ್ದು, 2001-02ನೇ ಸಾಲಿನಿಂದ ನಿಷ್ಕ್ರಿಯಗೊಂಡಿದ್ದು, ಹಾಲು ಶೇಖರಣೆ ಕಾರ್ಯವನ್ನು ಸ್ಥಗಿತಗೊಳಿಸಿರುತ್ತಾರೆ ಮತ್ತು ದಿನಾಂಕ: 7.9.2002 ರಂದು ನಡೆದ 2000-01ನೇ ಸಾಲಿನ ಸರ್ವ ಸದಸ್ಯರ ಸಭೆಯ ನಿರ್ಣಯ 8(2) ರಲ್ಲಿ ಸಂಘವನ್ನು ಮುಚ್ಚುವ ಸಲುವಾಗಿ ಸರ್ವಾನುಮತದ ತೀರ್ಮಾನ ಕೈಗೊಂಡಿರುವುದಾಗಿ ಹಾಗೂ ಈ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ವರದಿ ಮಾಡಿ, ಸಮಾಪನೆಗೊಳಿಸಲು ಉಲ್ಲೇಖಿತ ಪತ್ರದಲ್ಲಿ ಸಾಗರ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಇವರು ವರದಿ ಮಾಡಿರುತ್ತಾರೆ.

ಈ ಸಂಘವು ನಿಷ್ಕ್ರಿಯಗೊಂಡಿದ್ದು, ನೋಂದಾಯಿಸಿದ ಬೈಲಾದಲ್ಲಿಯ ಉದ್ದೇಶಗಳಂತೆ ಕಾರ್ಯನಿರ್ವಹಿಸದೇ, ಹಾಲು ಶೇಖರಣೆ ಕಾರ್ಯವನ್ನು ಸಲ್ಲಿಸಿದ್ದರಿಂದ ಮತ್ತು ದಿನಾಂಕ: 7.9.2002 ರಂದು ನಡೆದ ಮಹಾಸಭೆಯಲ್ಲಿ ಸಂಘವನ್ನು ಮುಚ್ಚಲು ನಿರ್ಣಯಿಸಿರುವುದರಿಂದ, ಈ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಮನಗಂಡು, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಕೆ. ಈಶ್ವರಸ್ವಾಮಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ:69:ಸಿಎಲ್‌ಎ:2001: ದಿನಾಂಕ: 21.11.2001 ರ ಪ್ರಕಾರ ದತ್ತವಾದ ಅಧಿಕಾರದಂತೆ, ಮತ್ತು ಪ್ರಸ್ತಾವನೆಯಲ್ಲಿ ಮಾಡಿದ ಕಾರಣಗಳಿಗಾಗಿ, ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಾನ್ಲೆ ಸಾಗರ ತಾಲ್ಲೂಕ್ ಈ ಸಂಘವನ್ನು ಸಮಾಪನೆಗೆ ಆದೇಶಿಸಿದೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73ರ ಪ್ರಕಾರ ಅಧಿಕ ಪ್ರಭಾರ ನಿರೀಕ್ಷಕರು ಸಹಾಯಕ ನಿಬಂಧಕರ ಕಛೇರಿ ಸಾಗರ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿದೆ.

ನೇಮಕಗೊಂಡ ಸಮಾಪನಾಧಿಕಾರಿಯವರು ಈ ಆದೇಶದ ದಿನಾಂಕದಿಂದ 15 ದಿನಗಳೊಳಗಾಗಿ ಪ್ರಭಾರ ವಹಿಸಿಕೊಂಡು ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 31ನೇ ಜನವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 498 **ಕೆ. ಈಶ್ವರಸ್ವಾಮಿ**

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡವಳಿಕೆಗಳು**

**ನಂ. ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್: 84 : 2002-2003, ದಿನಾಂಕ: 28ನೇ ಫೆಬ್ರವರಿ 2004**

**ವಿಷಯ:** ಸಮಾಪನಾ ಆದೇಶಿತ ಶ್ರೀ ಬನಶಂಕರಿ ನೇಕಾರರ ಸಹಕಾರ ಸಂಘ ನಿ., ಕುಂಶಿ, ಶಿವಮೊಗ್ಗ ತಾಲ್ಲೂಕ್ ಇದರ ನೋಂದಣಿ ರದ್ದತಿ - ಬಗ್ಗೆ.

**ಉಲ್ಲೇಖ:**
1) ಸ.ಸಂ. ಗಳ ಉಪ ನಿಬಂಧಕರು, ಶಿವಮೊಗ್ಗ ರವರ ಆದೇಶ ನಂ. ಡಿಆರ್‌ಎಸ್ : ಎಲ್‌ಕ್ಯೂಡಿ : ಸಿಆರ್. 64: 87-88: ದಿ: 29.4.1987, 3.9.93 ಮತ್ತು 11.2.2003.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ರವರ ಪತ್ರ ನಂ. ಎಆರ್-24: ಸಮಾಪನೆ: 2003-04: ದಿನಾಂಕ: 28.2.2004.

**ಪ್ರಸ್ತಾವನೆ:-**

ಶ್ರೀ ಬನಶಂಕರಿ ನೇಕಾರರ ಸಹಕಾರ ಸಂಘ ನಿಯಮಿತ, ಕುಂಸಿ, ಶಿವಮೊಗ್ಗ ತಾ: ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ರವರ ಕಾರ್ಯಾಲಯದ ಸಂಖ್ಯೆ: ಎಆರ್‌ಎಸ್:296: 72-73, ದಿನಾಂಕ: 16.11.1972 ರಲ್ಲಿ ನೋಂದಣಿಯಾಗಿರುತ್ತದೆ. ಈ ಸಂಘದ ಕಾರ್ಯವ್ಯಾಪ್ತಿಯು 5 ಗ್ರಾಮಗಳಿಗೆ ಸೀಮಿತವಾಗಿದ್ದು, ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿ ಇರುತ್ತದೆ. ಈ ಸಂಘವು 1982-83ನೇ ಸಾಲಿನಿಂದಲೂ ಯಾವುದೇ ವ್ಯವಹಾರ ನಡೆಸದೇ ನಿಷ್ಕ್ರಿಯಗೊಂಡಿರುತ್ತದೆ, ನೋಂದಾಯಿತ ಬೈಲಾದಲ್ಲಿಯ ಉದ್ದೇಶದನ್ವಯ ಕಾರ್ಯನಿರ್ವಹಿಸದೇ ಇರುವ ಪ್ರಯುಕ್ತ ಉಲ್ಲೇಖ (1) ರಲ್ಲಿಯ ದಿನಾಂಕ: 29.4.1987 ರಲ್ಲಿ ಸಮಾಪನೆಗೊಳಿಸಿ ಸಹಕಾರ ವಿಸ್ತರಣಾಧಿಕಾರಿ ಶಿವಮೊಗ್ಗ ರವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿದೆ. ಈ ಸಂಘವು ಕೈಗಾರಿಕಾ ಇಲಾಖೆಯ ಸಂಪರ್ಕ ಹೆಚ್ಚಾದ್ದರಿಂದ ಕೈಗಾರಿಕಾ ವಿಸ್ತರಣಾಧಿಕಾರಿ, ಶಿವಮೊಗ್ಗ ರವರನ್ನು ಸಮಾಪನಾಧಿಕಾರಿಯಾಗಿ ಉಲ್ಲೇಖ (1) ರಲ್ಲಿಯ ದಿನಾಂಕ: 3.9.93 ರಲ್ಲಿ ಮಾರ್ಪಾಡು ಆದೇಶ ಮಾಡಲಾಗಿತ್ತು. ಆದರೆ ಪುನಃ ಸಮಾಪನಾಧಿಕಾರಿ ಬದಲಾವಣೆಗೆ ಕೋರಿದ

ಮೇರೆಗೆ ಉಲ್ಲೇಖ (1) ರಲ್ಲಿಯ ದಿನಾಂಕ: 11.2.2003 ರಲ್ಲಿ ಶ್ರೀ ಹೆಚ್. ಷಣ್ಮುಖಪ್ಪ ಮಾರಾಟಾಧಿಕಾರಿ ನಿ. 441 ಡಿಸಿಸಿ ಬ್ಯಾಂಕ್ ನಿ., ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿದ್ದು, ಅದರಂತೆ ಸದರಿಯವರು ಸಮಾಪನಾಧಿಕಾರಿಯಾಗಿ ದಿನಾಂಕ: 6.8.2003 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಈ ಸಂಘದ ಹಿಂದಿನ ಕಾರ್ಯದರ್ಶಿಯವರಿಂದ ಪೂರ್ಣ ಪ್ರಭಾರ ಪಡೆಯಲು ಸಾಧ್ಯವಾಗಿರುವುದಿಲ್ಲವೆಂದೂ ಹಾಗೂ ಈ ಸಂಘವು ಸ್ಥಗಿತಗೊಂಡು ಸುಮಾರು 20 ವರ್ಷ ಮೇಲ್ಪಟ್ಟಿದ್ದು, ಯಾವ ದಾಖಲಾತಿ ದೊರೆಯುತ್ತಿಲ್ಲ ಮತ್ತು ಈ ಸಂಘದ ವಾರಸುದಾರರು ಯಾರೂ ಇರುವುದಿಲ್ಲವೆಂದು ನಡವಳಿಕೆ ಮೂಲಕ ವರದಿ ಮಾಡಿರುತ್ತಾರೆ. ಈ ಸಂಘದ ಲೆಕ್ಕಪತ್ರಗಳು ದಿನಾಂಕ: 30.6.86 ಕ್ಕೆ ಇದ್ದಂತೆ ಆಡಿಟ್ ಆಗಿದ್ದು, ತದನಂತರ ಆಡಿಟ್ ಆಗಿರುವುದಿಲ್ಲ. ಈ ಸಂಘದಲ್ಲಿ ಸರ್ಕಾರದ ಷೇರು ಹಾಗೂ ಸರ್ಕಾರಿ ಸಾಲ ಯಾವುದೇ ಬಾಕಿಯಿರುವುದಿಲ್ಲವೆಂದು ಸಮಾಪನಾಧಿಕಾರಿಯವರು ವರದಿ ಮಾಡಿರುತ್ತಾರೆ. ಹಾಗೂ ಈ ಸಂಬಂಧ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ, ರವರು ದೃಢೀಕರಿಸಿರುತ್ತಾರೆ. ಈ ಸಂಘದಲ್ಲಿ ಯಾವುದೇ ಸ್ಥಿರಾಸ್ಥಿ ಇರುವುದಿಲ್ಲ ಮತ್ತು ಹಣ ದುರುಪಯೋಗದ ಪ್ರಕರಣ ಇರುವುದಿಲ್ಲವೆಂದು ನಡವಳಿಕೆ ಮೂಲಕ ವರದಿ ಮಾಡಿರುತ್ತಾರೆ. ದಿನಾಂಕ: 30.6.1986ಕ್ಕೆ ಇದ್ದಂತೆ ಆಡಿಟ್ ವರದಿ ಆಧಾರದ ಮೇರೆಗೆ ಆಸ್ತಿ ಜವಾಬ್ದಾರಿ ಹೊಂದಾಣಿಕೆ ಮಾಡಿ, ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿರುತ್ತಾರೆ. ಈ ಸಂಘವು ನಷ್ಟದಲ್ಲಿರುವುದರಿಂದ ಸದಸ್ಯರ ಷೇರು ಬೆಲೆ ಶೂನ್ಯವಾಗಿದ್ದು, ಷೇರು ಪಾವತಿ ಮಾಡಲು ಸಾಧ್ಯವಿಲ್ಲವೆಂದು ವರದಿ ಮಾಡಿರುತ್ತಾರೆ. ಈ ಸಂಘವು ನೋಂದಣಿಯಾಗಿ 35 ವರ್ಷಗಳಾಗಿದ್ದು, ಚರಾಸ್ತಿಗಳಾದ ಮಗ್ಗಗಳು ಪೂರ್ಣ ಹಾಳಾಗಿದ್ದು, ನಷ್ಟಕ್ಕೆ ವರ್ಗಾಯಿಸಿರುತ್ತಾರೆ.

ಈ ಎಲ್ಲಾ ಹಿನ್ನೆಲೆಯಲ್ಲಿ ಮತ್ತು ಸಮಾಪನೆಗೊಂಡು ಸುಮಾರು 20 ವರ್ಷ ಮೇಲ್ಪಟ್ಟಿದ್ದು ದಿನಾಂಕ: 11.1.2000 ರಂದು ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿ ಸಾರ್ವಜನಿಕರಿಂದ ಹಾಗೂ ಸಂಘ ಸಂಸ್ಥೆಗಳಿಂದ ಆಕ್ಷೇಪಣೆ ಕೋರಿದ್ದು, ಆದರೆ ನೋಂದಣಿ ರದ್ದುಪಡಿಸುವಲ್ಲಿ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲ ಹಾಗೂ ಡಿಸಿಸಿ ಬ್ಯಾಂಕ್ ಸಾಲಕ್ಕೆ ಅಮಲ್ಜಾರಿ ಹೊಂದಿದ ಮಾರಾಟಾಧಿಕಾರಿಯವರು ರಹ ಇಲ್ಲವೆಂದು ಅಮಲ್ಜಾರಿ ಹಿಂದಿರುಗಿಸಿ, ವರದಿ ಮಾಡಿರುತ್ತಾರೆ.

ಉಲ್ಲೇಖ (2) ರಲ್ಲಿಯ ಪತ್ರದ ಶಿಫಾರಸ್ ಆಧಾರದ ಮೇರೆಗೆ ಈ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ, ಈ ಸಂಘದ ನೋಂದಣಿ ನಂ. ಎಆರ್‌ಎಸ್: 296: 72-73: ದಿನಾಂಕ: 16.11.1972ನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಾಣಿಸಿದಂತೆ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001: ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರದಂತೆ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು, ಶ್ರೀ ಬನಶಂಕರಿ ನೇಕಾರರ ಸಹಕಾರ ಸಂಘ ನಿ: ಕುಂಸಿ, ಶಿವಮೊಗ್ಗ ತಾಲ್ಲೂಕ್, ಇದರ ನೋಂದಣಿ ನಂ. ಎಆರ್‌ಎಸ್: 296: 72-73: ದಿನಾಂಕ: 16.11.72ನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಈ ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿದೆ ಎಂದು ಹಾಗೂ ಈ ಸಂಘವು ಅಸ್ತಿತ್ವದಲ್ಲಿ ಇಲ್ಲವೆಂದು ದೃಢೀಕರಿಸಿದೆ. ಈ ಸಂಘಕ್ಕೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ, ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 28ನೇ ಫೆಬ್ರವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 499

**ಕೆ. ಈಶ್ವರಸ್ವಾಮಿ**

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಇವರ ನಡವಳಿಕೆಗಳು**

**ನಂ. ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್: 47 : 2003-2004, ದಿನಾಂಕ: 24ನೇ ಜನವರಿ 2004**

**ವಿಷಯ:** ನಿಷ್ಕ್ರಿಯಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಬೇಡರ ಹೊಸಹಳ್ಳಿ, ಶಿವಮೊಗ್ಗ ತಾಲ್ಲೂಕ್, ಇದರ ಸಮಾಪನೆ - ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ನಂ. ಎಆರ್-24: ಸಮಾಪನೆ: ಸಿಆರ್-73:03-04: ದಿನಾಂಕ: 1.10.2003.

2) ಈ ಕಚೇರಿಯ ಸಮಸಂಖ್ಯೆಯ ಕಾರಣ ಕೇಳಿ ನೋಟೀಸ್ ದಿನಾಂಕ: 29.12.2003.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ನಂ. ಎಆರ್-24: ಎಲ್‌ಕ್ಯೂಡಿ: ಸಿಆರ್-73: 03-04: 1517: ದಿನಾಂಕ: 9.1.2004.

**ಪ್ರಸ್ತಾವನೆ:-**

ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಬೇಡರ ಹೊಸಹಳ್ಳಿ ಶಿವಮೊಗ್ಗ ತಾಲ್ಲೂಕ್, ಈ ಸಂಘವು ಶಿವಮೊಗ್ಗ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನಂಬರ್ 1388:86-87, ದಿನಾಂಕ: 12.11.86 ರಲ್ಲಿ ನೋಂದಣಿಯಾಗಿದ್ದು, ಕಾರ್ಯವ್ಯಾಪ್ತಿಯು ಬೇಡರಹೊಸಹಳ್ಳಿ ಗ್ರಾಮಕ್ಕೆ ಸೀಮಿತವಾಗಿರುತ್ತದೆ. ಈ ಸಂಘವು ದಿನಾಂಕ: 31.8.2002 ರಂದು ಸ್ಥಗಿತಗೊಂಡು, ಬೈಲಾದಲ್ಲಿಯ ಉದ್ದೇಶಗಳಂತೆ ಕಾರ್ಯನಿರ್ವಹಿಸುತ್ತಿಲ್ಲ. ಹಾಲು ಶೇಖರಣೆ ಸ್ಥಗಿತಗೊಳಿಸಿದೆ ಎಂದು ಉಲ್ಲೇಖ (1) ರಲ್ಲಿಯ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ, ರವರಿಂದ ಸದರಿ ಪ್ರಾಪ್ತವಾಗಿದ್ದು, ಸದರೀ ವರದಿಯ ಪ್ರಕಾರ ದಿನಾಂಕ: 31.8.2002 ರಿಂದ ಹಾಲು ಶೇಖರಣೆ ಕಾರ್ಯ ನಡೆಸುತ್ತಿಲ್ಲ, ಆಡಳಿತ ಮಂಡಳಿಯವರಿಗೆ ನೋಟೀಸ್ ನೀಡಿ

ಅನೇಕ ಪ್ರಯತ್ನ ಮಾಡಿದಾಗ್ಯೂ, ಸಂಘದವರಿಗೆ ಆಸಕ್ತಿ ಇರುವುದಿಲ್ಲ. ಈ ಸಂಘವನ್ನು ಸಮಾಪನೆಗೊಳಿಸಲು ಕ್ರಮಕ್ಕಾಗಿ ತಿಳಿಸಿದ್ದು, ಈ ಸಂಘದ ಆಡಳಿತ ಮಂಡಳಿಯ ನಿರ್ದೇಶಕರುಗಳಿಗೆ ಉಲ್ಲೇಖ (2) ರಲ್ಲಿಯ ಪತ್ರದಲ್ಲಿ ಕಾರಣ ಕೇಳಿ ನೋಟೀಸ್ ನೀಡಿದ್ದು, ವಿವರಣೆ ನೀಡಲು ಕೋರಲಾಗಿತ್ತು. ಈ ಸಂಘದ ಆಡಳಿತ ಮಂಡಳಿಯವರು ನೋಟೀಸ್ ಸ್ವೀಕರಿಸಿದ್ದು, ನೋಟೀಸಿನಲ್ಲಿ ಕಲ್ಪಿಸಿದ ಅವಧಿ ಮುಕ್ತಾಯವಾದರೂ, ಯಾವುದೇ ವಿವರಣೆ ಸಲ್ಲಿಸಿರುವುದಿಲ್ಲ. ಇದರಿಂದ ಈ ಸಂಘದವರಿಗೆ ಆಸಕ್ತಿ ಇಲ್ಲವೆಂದು ವ್ಯಕ್ತವಾಗುತ್ತದೆ. ಈ ಸಂಘದಿಂದ ಸದಸ್ಯರಿಗಾಗಲೀ, ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇರುವುದಿಲ್ಲವಾದ್ದರಿಂದ, ಈ ಸಂಘವನ್ನು ಸಮಾಪನೆಗೊಳಿಸಲು ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಕೆ. ಈಶ್ವರಸ್ವಾಮಿ, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ:69:ಸಿಎಲ್ಎಂ:2001: ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದಂತೆ ಮತ್ತು ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಗಾಗಿ, ಹಾಲು ಉತ್ಪಾದಕರ ಸಹಕಾರ ಸಂಘ ನಿ: ಬೇಡರಹೊಸಹಳ್ಳಿ, ಶಿವಮೊಗ್ಗ ತಾಲ್ಲೂಕ್, ಈ ಸಂಘವನ್ನು ಸಮಾಪನೆಗೆ ಆದೇಶಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73 ರನ್ವಯ ಮಾರ್ಗಾಧಿಕಾರಿ ಶಿವಮೊಗ್ಗ ಜಿಲ್ಲೆ, ಸಹಕಾರ ಸಂಘಗಳ ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ನಿ., ಶಿವಮೊಗ್ಗ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿದೆ.

ನೇಮಕಗೊಂಡ ಸಮಾಪನಾಧಿಕಾರಿಯವರು ಈ ಆದೇಶದ ದಿನಾಂಕದಿಂದ 15 ದಿನಗಳೊಳಗಾಗಿ ಪ್ರಭಾರ ವಹಿಸಿಕೊಂಡು, ಈ ಕಚೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 24ನೇ ಜನವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 500 **ಕೆ. ಈಶ್ವರಸ್ವಾಮಿ**

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಇವರ ನಡವಳಿಕೆಗಳು**

**ನಂ. ಡಿಆರ್ಎಸ್:ಸಮಾಪನೆ:ಡಿಎಲ್ಎಸ್: 53 : 2003-2004, ದಿನಾಂಕ: 31ನೇ ಜನವರಿ 2004**

**ವಿಷಯ:** ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಹೊಸಹಳ್ಳಿ, ಶಿವಮೊಗ್ಗ ತಾ: ಇದರ ಸಮಾಪನೆ - ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ಸಂ. ಸನಿ-24: ಸಮಾಪನೆ: 2003-04: 1597: ದಿನಾಂಕ: 27.1.2004.

**ಪ್ರಸ್ತಾವನೆ:-**

ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿಯಮಿತ, ಹೊಸಹಳ್ಳಿ ಶಿವಮೊಗ್ಗ ತಾಲ್ಲೂಕ್, ಈ ಸಂಘವು ಶಿವಮೊಗ್ಗ ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ಸಂಖ್ಯೆ: 28665: ದಿನಾಂಕ: 5.12.2000 ರಲ್ಲಿ ನೋಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಇದ್ದು, ಈ ಸಂಘದ ಕಾರ್ಯವ್ಯಾಪ್ತಿಯಲ್ಲಿ ಬೃಹತ್ ನೀರಾವರಿ ಯೋಜನೆಯಡಿ ಮತ್ತೊಂದು ನೀರು ಬಳಕೆದಾರರ ಸಹಕಾರ ಸಂಘವು ಭದ್ರಾ ಕಾಡಾ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಿಂದ ನೋಂದಣಿ ಆಗಿದ್ದು, ಈ ಸಂಘದವರು ದಿನಾಂಕ: 2.9.2002 ರಂದು ನಡೆದ ಮಹಾಸಭೆಯಲ್ಲಿ ಎಲ್ಲಾ ಸದಸ್ಯರ ಪೂರ್ಣ ಷೇರು ಹಣವನ್ನು ಹೊಸದಾಗಿ ನೋಂದಣಿಯಿಂದ ಸಂಘಕ್ಕೆ ವರ್ಗಾಯಿಸಲು ನಿರ್ಣಯಿಸಿದಂತೆ, ಪೂರ್ಣ ಷೇರು ಹಣ ನಿರ್ಣಯಿಸಿರುತ್ತಾರೆ, ಪ್ರಯುಕ್ತ ಈ ಸಂಘದ ಸದಸ್ಯತ್ವ ಶೂನ್ಯವಾಗಿದ್ದು, ನಗದು ಪುಸ್ತಕದಲ್ಲಿ ಜಮಾ-ಖರ್ಚು ಆಗಿರುವುದಾಗಿ, ಉಲ್ಲೇಖಿತ ಪತ್ರದಲ್ಲಿ ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ವರದಿ ಮಾಡಿರುತ್ತಾರೆ. ಈ ಸಂಘದಲ್ಲಿ ಆಸ್ತಿ-ಜವಾಬ್ದಾರಿ ಶೂನ್ಯವಾಗಿರುವ ಪ್ರಯುಕ್ತ ಮತ್ತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)(ಎ) ಪ್ರಕಾರ ಸದಸ್ಯರ ಸಂಖ್ಯೆ ನೋಂದಣಿಗೆ ಅಗತ್ಯವಿರುವ ಕನಿಷ್ಠ ಸಂಖ್ಯೆಗಿಂತ ಕಡಿಮೆಯಾಗಿರುವ ಪ್ರಯುಕ್ತ ಸಮಾಪನೆಗೊಳಿಸಿ, ನೋಂದಣಿ ರದ್ದತಿ ಮಾಡಲು ಕೋರಿರುತ್ತಾರೆ.

ಈ ಸಂಘದಲ್ಲಿ ಇರಬೇಕಾದ ಸದಸ್ಯರ ಸಂಖ್ಯೆ ಕನಿಷ್ಠ ಸಂಖ್ಯೆಗಿಂತ ಕಡಿಮೆಯಾಗಿರುವ ಪ್ರಯುಕ್ತ, ತನ್ನ ಅಸ್ತಿತ್ವವನ್ನು ಕಳೆದುಕೊಂಡಂತಾಗಿದ್ದು, ಈ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗೆ ಯಾವುದೇ ಪ್ರಯೋಜನ ಇರುವುದಿಲ್ಲವೆಂದು ಮನಗಂಡು, ನೋಂದಣಿ ಸಂಖ್ಯೆ ರದ್ದುಪಡಿಸುವ ಪೂರ್ವದಲ್ಲಿ ಕನಿಷ್ಠ ಅವಧಿಯವರೆಗೆ ಸಮಾಪನೆಯಲ್ಲಿಡುವುದು ಅವಶ್ಯಕವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಕೆ. ಈಶ್ವರಸ್ವಾಮಿ, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ:69:ಸಿಎಲ್ಎಂ:2001: ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದಂತೆ ಮತ್ತು ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಗಾಗಿ, ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಹೊಸಹಳ್ಳಿ ಶಿವಮೊಗ್ಗ ತಾಲ್ಲೂಕ್ ಈ ಸಂಘವನ್ನು ಸಮಾಪನೆಗೊಳಿಸಿ ಆದೇಶಿಸಿದೆ.

ಈ ಸಂಘದಲ್ಲಿ ಆಸ್ತಿ-ಜವಾಬ್ದಾರಿ ಶೂನ್ಯವಾಗಿದ್ದು, ಸದಸ್ಯರ ಸಂಖ್ಯೆ ಇಲ್ಲದಂತಾಗಿರುವುದರಿಂದ ಎರಡು ತಿಂಗಳ ಅವಧಿಯವರೆಗೆ ಸಮಾಪನೆಯಲ್ಲಿರಿಸಿ ನೋಂದಣಿ ರದ್ದುಪಡಿಸುವ ಪ್ರಯುಕ್ತ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73 ರನ್ವಯ ಸಮಾಪನಾಧಿಕಾರಿಯನ್ನು ನೇಮಕಗೊಳಿಸಿರುವುದು ಅವಶ್ಯಕವಾಗಿರುವುದಿಲ್ಲ.

ಈ ಆದೇಶವನ್ನು ದಿನಾಂಕ: 31ನೇ ಜನವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 501

**ಕೆ. ಈಶ್ವರಸ್ವಾಮಿ**

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡವಳಿಕೆಗಳು**

**ವಿಷಯ:** ನಿಷ್ಕ್ರಿಯಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕಮನವಳ್ಳಿ ಸೊರಬ ತಾಲ್ಲೂಕ್ ಇದರ ಸಮಾಪನೆ - ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆಯ ಪತ್ರ ದಿ: 16.1.2004.

2) ಸ.ಸಂ. ಗಳ ಸಹಾಯಕ ನಿಬಂಧಕರು ಸಾಗರ ರವರ ಪತ್ರ ನಂ. ಎಆರ್.25/ಸಮಾಪನೆ/105/2003-04/ದಿನಾಂಕ: 26.12.2003.

3) ಸ.ಸಂ. ಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ. ಎಆರ್. 25/ಸಮಾಪನೆ/5457/2003-04/ ದಿ: 4.2.2004.

**ಪ್ರಸ್ತಾವನೆ:-**

ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಕಮನವಳ್ಳಿ ಸೊರಬ ತಾಲ್ಲೂಕ್ ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪ ವಿಭಾಗ, ಸಾಗರ ರವರ ಕಾರ್ಯಾಲಯದ ಸಂಖ್ಯೆ: ಎಆರ್.25/ನೋಂದಣಿ/18538/91-92/ ದಿನಾಂಕ: 12.3.1992 ರಲ್ಲಿ ನೋಂದಣಿಯಾಗಿದ್ದು, ಕಾರ್ಯವ್ಯಾಪ್ತಿ ಕಮನವಳ್ಳಿ ಗ್ರಾಮಕ್ಕೆ ಸೀಮಿತವಾಗಿದ್ದು, ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದು, ಸಮಾಪನೆಗೊಳಿಸಲು ಉಲ್ಲೇಖ (2) ರಲ್ಲಿಯ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ರವರು ವರದಿ ಮಾಡಿರುತ್ತಾರೆ. ಈ ವರದಿಯನ್ನು ಪರಿಶೀಲಿಸಲಾಗಿ, ನೋಂದಣಿಯಾದ ಬೈಲಾದಲ್ಲಿಯ ನಿಬಂಧನೆಯಂತೆ ಕಾರ್ಯನಿರ್ವಹಿಸುತ್ತಿಲ್ಲ, ವಾರ್ಷಿಕ ಮಹಾಸಭೆ ನಡೆಸಿರುವುದಿಲ್ಲ, ಹಾಲು ಸಂಗ್ರಹಣೆ ಕಾರ್ಯ ಸ್ಥಗಿತಗೊಂಡಿದೆ ಎಂದು ದೃಢಪಟ್ಟಿದೆ.

ಈ ಮೇಲ್ಕಂಡ ನ್ಯೂನತೆಗಳ ಹಿನ್ನೆಲೆಯಲ್ಲಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 72(2) ರನ್ವಯ ಉಲ್ಲೇಖ (2)ರ ನೋಟೀಸ್ ನೀಡಲಾಗಿದ್ದು, ನೋಟೀಸ್ ಜಾರಿಗೊಳಿಸಲಾಗಿದೆ. ಈ ಸಂಘದ ಸಮಾಪನೆ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಲಿಖಿತವಾಗಿ ವಿವರಣೆ ಕೊಡಲು ಕೇಳಲಾಗಿದ್ದು, ವಿವರಣೆ ಬಂದಿರುವುದಿಲ್ಲ. ಹಾಗೂ ನೀಡಿದ ಕಾಲಾವಕಾಶ ಗತಿಸಿರುತ್ತದೆ. ಈ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ನಂ. ಡಿಆರ್ಎಸ್:ಸಮಾಪನೆ:ಡಿಎಲ್ಎಸ್/37/2003-2004, ದಿನಾಂಕ: 13ನೇ ಫೆಬ್ರವರಿ 2004**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಕೆ. ಈಶ್ವರಸ್ವಾಮಿ, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ/69/ಸಿಎಲ್ಎಂ:2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಕಮನವಳ್ಳಿ ಸೊರಬ ತಾಲ್ಲೂಕ್, ಈ ಸಂಘವನ್ನು ಸಮಾಪನೆಗೆ ಆದೇಶಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘ ಕಾಯ್ದೆ 1959ರ ಕಲಂ 73 ರನ್ವಯ ಮಾರ್ಗಾಧಿಕಾರಿ ಶಿವಮೊಗ್ಗ ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ನಿಯಮಿತ ಸೊರಬ ತಾಲ್ಲೂಕ್ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿದ್ದೇನೆ.

ಮೇಲ್ಕಂಡ ಸಮಾಪನಾಧಿಕಾರಿಯವರು ಈ ಆದೇಶದ 30 ದಿನಗಳೊಳಗಾಗಿ ಈ ಸಂಘದ ಪ್ರಭಾರವನ್ನು ವಹಿಸಿಕೊಂಡು ಸಮಾಪನಾ ನಡುವಳಿಕೆಗಳನ್ನು ನಡೆಸತಕ್ಕದ್ದು.

ಈ ಆದೇಶವನ್ನು ದಿನಾಂಕ: 13ನೇ ಫೆಬ್ರವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 502

**ಕೆ. ಈಶ್ವರಸ್ವಾಮಿ**

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡವಳಿಕೆಗಳು**

**ವಿಷಯ:** ನಿಷ್ಕ್ರಿಯಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮುಟುಗುಪ್ಪೆ ಸೊರಬ ತಾಲ್ಲೂಕ್ ಇದರ ಸಮಾಪನೆ - ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆಯ ಪತ್ರ ದಿ: 16.1.2004.

2) ಸ.ಸಂ. ಗಳ ಸಹಾಯಕ ನಿಬಂಧಕರು ಸಾಗರ ರವರ ಪತ್ರ ನಂ. ಎಆರ್.25/ಸಮಾಪನೆ/ಹಾಉಸಸಂನಿ./ಮುಟುಗುಪ್ಪೆ/ಸಿಆರ್/106/ 2003-04/ದಿನಾಂಕ: 26.12.2003.

3) ಸ.ಸಂ. ಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ. ಎಆರ್. 25/ಸಮಾಪನೆ/5457/2003-04/ ದಿ: 4.2.2004.

**ಪ್ರಸ್ತಾವನೆ:-**

ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಮುಟುಗುಪ್ಪೆ ಸೊರಬ ತಾಲ್ಲೂಕ್ ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪ ವಿಭಾಗ, ಸಾಗರ ರವರ ಕಾರ್ಯಾಲಯದ ಸಂಖ್ಯೆ: ಎಆರ್.25/ಎಆರ್‌ಎಸ್/525/ಎಆರ್‌ಟಿ/18522/90-91/ ದಿನಾಂಕ: 31.3.1991 ರಲ್ಲಿ ನೋಂದಣಿಯಾಗಿದ್ದು, ಕಾರ್ಯವ್ಯಾಪ್ತಿ ಮುಟುಗುಪ್ಪೆ ಗ್ರಾಮಕ್ಕೆ ಸೀಮಿತವಾಗಿದ್ದು, ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದು, ಸಮಾಪನೆಗೊಳಿಸಲು ಉಲ್ಲೇಖ (2) ರಲ್ಲಿಯ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ರವರು ವರದಿ ಮಾಡಿರುತ್ತಾರೆ. ಈ ವರದಿಯನ್ನು ಪರಿಶೀಲಿಸಲಾಗಿ, ನೋಂದಣಿಯಾದ ಬೈಲಾದಲ್ಲಿಯ ನಿಬಂಧನೆಯಂತೆ ಕಾರ್ಯನಿರ್ವಹಿಸುತ್ತಿಲ್ಲ, ವಾರ್ಷಿಕ ಮಹಾಸಭೆ ನಡೆಸಿರುವುದಿಲ್ಲ, ಹಾಲು ಸಂಗ್ರಹಣೆ ಕಾರ್ಯ ಸ್ಥಗಿತಗೊಂಡಿದೆ ಎಂದು ದೃಢಪಟ್ಟಿದೆ.

ಈ ಮೇಲ್ಕಂಡ ನ್ಯೂನತೆಗಳ ಹಿನ್ನೆಲೆಯಲ್ಲಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 72(2) ರನ್ವಯ ಉಲ್ಲೇಖ (2)ರ ನೋಟೀಸ್ ನೀಡಲಾಗಿದ್ದು, ನೋಟೀಸ್ ಜಾರಿಗೊಳಿಸಲಾಗಿದೆ. ಈ ಸಂಘದ ಸಮಾಪನೆ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಲಿಖಿತವಾಗಿ ವಿವರಣೆ ಕೊಡಲು ಕೇಳಲಾಗಿದ್ದು, ವಿವರಣೆ ಬಂದಿರುವುದಿಲ್ಲ. ಹಾಗೂ ನೀಡಿದ ಕಾಲಾವಕಾಶ ಗತಿಸಿರುತ್ತದೆ. ಈ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ನಂ. ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್/1932/2003-2004, ದಿನಾಂಕ: 13ನೇ ಫೆಬ್ರವರಿ 2004**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಕೆ. ಈಶ್ವರಸ್ವಾಮಿ, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ/69/ಸಿಎಲ್‌ಎಂ:2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಮುಟುಗುಪ್ಪೆ, ಸೊರಬ ತಾಲ್ಲೂಕ್, ಈ ಸಂಘವನ್ನು ಸಮಾಪನೆಗೆ ಆದೇಶಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘ ಕಾಯ್ದೆ 1959ರ ಕಲಂ 73 ರನ್ವಯ ಮಾರ್ಗಾಧಿಕಾರಿ ಶಿವಮೊಗ್ಗ ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ನಿಯಮಿತ ಸೊರಬ ತಾಲ್ಲೂಕ್ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿದ್ದೇನೆ.

ಮೇಲ್ಕಂಡ ಸಮಾಪನಾಧಿಕಾರಿಯವರು ಈ ಆದೇಶದ 30 ದಿನಗಳೊಳಗಾಗಿ ಈ ಸಂಘದ ಪ್ರಭಾರವನ್ನು ವಹಿಸಿಕೊಂಡು ಸಮಾಪನಾ ನಡುವಳಿಕೆಗಳನ್ನು ನಡೆಸತಕ್ಕದ್ದು.

ಈ ಆದೇಶವನ್ನು ದಿನಾಂಕ: 13ನೇ ಫೆಬ್ರವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 503 **ಕೆ. ಈಶ್ವರಸ್ವಾಮಿ**

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡವಳಿಕೆಗಳು**

**ವಿಷಯ:** ನಿಷ್ಕ್ರಿಯಗೊಂಡ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಕೊಡಕಣಿ ಸೊರಬ ತಾಲ್ಲೂಕ್ ಇದರ ಸಮಾಪನೆ - ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆಯ ಪತ್ರ ದಿ: 30.12.2003.

2) ಸ.ಸಂ. ಗಳ ಸಹಾಯಕ ನಿಬಂಧಕರು ಸಾಗರ ರವರ ಪತ್ರ ನಂ. ಎಆರ್.25/ಸಮಾಪನೆ/109/2003-04/ದಿನಾಂಕ: 26.12.2003.

3) ಸ.ಸಂ. ಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ. ಎಆರ್. 25/ಸಮಾಪನೆ/5457/2003-04/ ದಿ: 4.2.2004.

**ಪ್ರಸ್ತಾವನೆ:-**

ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿಯಮಿತ, ಕೊಡಕಣಿ ಸೊರಬ ತಾಲ್ಲೂಕ್ ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪ ವಿಭಾಗ, ಸಾಗರ ರವರ ಕಾರ್ಯಾಲಯದ ಸಂಖ್ಯೆ: ಎಆರ್.25/ನೋಂದಣಿ/ಸಿಆರ್-20/25413/98-99/ ದಿನಾಂಕ: 9.6.1998 ರಲ್ಲಿ ನೋಂದಣಿಯಾಗಿದ್ದು, ಕಾರ್ಯವ್ಯಾಪ್ತಿ ಕೊಡಕಣಿ ಗ್ರಾಮಕ್ಕೆ ಸೀಮಿತವಾಗಿದ್ದು, ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದು, ಸಮಾಪನೆಗೊಳಿಸಲು ಉಲ್ಲೇಖ (2) ರಲ್ಲಿಯ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ರವರು ವರದಿ ಮಾಡಿರುತ್ತಾರೆ. ಈ ವರದಿಯನ್ನು ಪರಿಶೀಲಿಸಲಾಗಿ, ನೋಂದಣಿಯಾದ ಬೈಲಾದಲ್ಲಿಯ ನಿಬಂಧನೆಯಂತೆ ಕಾರ್ಯನಿರ್ವಹಿಸುತ್ತಿಲ್ಲ, ವಾರ್ಷಿಕ ಮಹಾಸಭೆ ನಡೆಸಿರುವುದಿಲ್ಲ, ಹಾಲು ಸಂಗ್ರಹಣೆ ಕಾರ್ಯ ಸ್ಥಗಿತಗೊಂಡಿದೆ ಎಂದು ದೃಢಪಟ್ಟಿದೆ.

ಈ ಮೇಲ್ಕಂಡ ನ್ಯೂನತೆಗಳ ಹಿನ್ನೆಲೆಯಲ್ಲಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 72(2) ರನ್ವಯ ಉಲ್ಲೇಖ (2)ರ ನೋಟೀಸ್ ನೀಡಲಾಗಿದ್ದು, ನೋಟೀಸ್ ಜಾರಿಗೊಳಿಸಲಾಗಿದೆ. ಈ ಸಂಘದ ಸಮಾಪನೆ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಲಿಖಿತವಾಗಿ ವಿವರಣೆ ಕೊಡಲು ಕೇಳಲಾಗಿದ್ದು, ವಿವರಣೆ ಬಂದಿರುವುದಿಲ್ಲ. ಹಾಗೂ ನೀಡಿದ ಕಾಲಾವಕಾಶ ಗತಿಸಿರುತ್ತದೆ. ಈ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ನಂ. ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/36/2003-04, ದಿನಾಂಕ: 13ನೇ ಫೆಬ್ರವರಿ 2004**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಕೆ. ಈಶ್ವರಸ್ವಾಮಿ, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ/69/ಸಿಎಲ್‌ಎಂ:2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿಯಮಿತ, ಕೊಡಕಣಿ, ಸೊರಬ ತಾಲ್ಲೂಕ್, ಈ ಸಂಘವನ್ನು ಸಮಾಪನೆಗೆ ಆದೇಶಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘ ಕಾಯ್ದೆ 1959ರ ಕಲಂ 73 ರನ್ವಯ ಮಾರ್ಗಾಧಿಕಾರಿ ಶಿವಮೊಗ್ಗ ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ನಿಯಮಿತ ಸೊರಬ ತಾಲ್ಲೂಕ್ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿದ್ದೇನೆ.

ಮೇಲ್ಕಂಡ ಸಮಾಪನಾಧಿಕಾರಿಯವರು ಈ ಆದೇಶದ 30 ದಿನಗಳೊಳಗಾಗಿ ಈ ಸಂಘದ ಪ್ರಭಾರವನ್ನು ವಹಿಸಿಕೊಂಡು ಸಮಾಪನಾ ನಡುವಳಿಕೆಗಳನ್ನು ನಡೆಸತಕ್ಕದ್ದು.

ಈ ಆದೇಶವನ್ನು ದಿನಾಂಕ: 13ನೇ ಫೆಬ್ರವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 504 **ಕೆ. ಈಶ್ವರಸ್ವಾಮಿ**

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡವಳಿಕೆಗಳು**

**ವಿಷಯ:** ನಿಷ್ಕ್ರಿಯಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಕುಪ್ಪೆ, ಸೊರಬ ತಾಲ್ಲೂಕ್ ಇದರ ಸಮಾಪನೆ - ಬಗ್ಗೆ.

**ಉಲ್ಲೇಖ:**
1) ಈ ಕಛೇರಿಯ ಸಮಸಂಖ್ಯೆಯ ಪತ್ರ ದಿ: 16.1.2004.
2) ಸ.ಸಂ. ಗಳ ಸಹಾಯಕ ನಿಬಂಧಕರು ಸಾಗರ ರವರ ಪತ್ರ ನಂ. ಎಆರ್.25/ಸಮಾಪನೆ/ಹಾಉಸಸಂನಿ.,/ಕುಪ್ಪೆ/ಸಿಆರ್.107/2003-04/ದಿನಾಂಕ: 26.12.2003.
3) ಸ.ಸಂ. ಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ. ಎಆರ್. 25/ಸಮಾಪನೆ/5457/2003-04/ ದಿ: 4.2.2004.

**ಪ್ರಸ್ತಾವನೆ:-**

ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಕುಪ್ಪೆ, ಸೊರಬ ತಾಲ್ಲೂಕ್ ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪ ವಿಭಾಗ, ಸಾಗರ ರವರ ಕಾರ್ಯಾಲಯದ ಸಂಖ್ಯೆ: ಸಸಂಸನಿ-25/ನೋಂದಣಿ/ಸಿಆರ್.116/25433/99-2000/ ದಿನಾಂಕ: 8.9.1999 ರಲ್ಲಿ ನೋಂದಣಿಯಾಗಿದ್ದು, ಕಾರ್ಯವ್ಯಾಪ್ತಿ ಕುಪ್ಪೆ ಗ್ರಾಮಕ್ಕೆ ಸೀಮಿತವಾಗಿದ್ದು, ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದು, ಸಮಾಪನೆಗೊಳಿಸಲು ಉಲ್ಲೇಖ (2) ರಲ್ಲಿಯ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ರವರು ವರದಿ ಮಾಡಿರುತ್ತಾರೆ. ಈ ವರದಿಯನ್ನು ಪರಿಶೀಲಿಸಲಾಗಿ, ನೋಂದಣಿಯಾದ ಬೈಲಾದಲ್ಲಿಯ ನಿಬಂಧನೆಯಂತೆ ಕಾರ್ಯನಿರ್ವಹಿಸುತ್ತಿಲ್ಲ, ವಾರ್ಷಿಕ ಮಹಾಸಭೆ ನಡೆಸಿರುವುದಿಲ್ಲ, ಹಾಲು ಸಂಗ್ರಹಣೆ ಕಾರ್ಯ ಸ್ಥಗಿತಗೊಂಡಿದೆ ಎಂದು ದೃಢಪಟ್ಟಿದೆ.

ಈ ಮೇಲ್ಕಂಡ ನ್ಯೂನತೆಗಳ ಹಿನ್ನೆಲೆಯಲ್ಲಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 72(2) ರನ್ವಯ ಉಲ್ಲೇಖ (2)ರ ನೋಟೀಸ್ ನೀಡಲಾಗಿದ್ದು, ನೋಟೀಸ್ ಜಾರಿಗೊಳಿಸಲಾಗಿದೆ. ಈ ಸಂಘದ ಸಮಾಪನೆ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಲಿಖಿತವಾಗಿ ವಿವರಣೆ ಕೊಡಲು ಕೇಳಲಾಗಿದ್ದು, ವಿವರಣೆ ಬಂದಿರುವುದಿಲ್ಲ. ಹಾಗೂ ನೀಡಿದ ಕಾಲಾವಕಾಶ ಗತಿಸಿರುತ್ತದೆ. ಈ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ನಂ. ಡಿಆರ್‌ಎಸ್:ಸಮಾಪನೆ:ಡಿಎಲ್‌ಎಸ್/1936/2003-2004, ದಿನಾಂಕ: 13ನೇ ಫೆಬ್ರವರಿ 2004**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಕೆ. ಈಶ್ವರಸ್ವಾಮಿ, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ/69/ಸಿಎಲ್‌ಎಂ:2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಕುಪ್ಪೆ, ಸೊರಬ ತಾಲ್ಲೂಕ್, ಈ ಸಂಘವನ್ನು ಸಮಾಪನೆಗೆ ಆದೇಶಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73 ರನ್ವಯ ಮಾರ್ಗಾಧಿಕಾರಿ ಶಿವಮೊಗ್ಗ ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ನಿಯಮಿತ ಸೊರಬ ತಾಲ್ಲೂಕ್ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿದ್ದೇನೆ.

ಮೇಲ್ಕಂಡ ಸಮಾಪನಾಧಿಕಾರಿಯವರು ಈ ಆದೇಶದ 30 ದಿನಗಳೊಳಗಾಗಿ ಈ ಸಂಘದ ಪ್ರಭಾರವನ್ನು ವಹಿಸಿಕೊಂಡು ಸಮಾಪನಾ ನಡುವಳಿಕೆಗಳನ್ನು ನಡೆಸತಕ್ಕದ್ದು.

ಈ ಆದೇಶವನ್ನು ದಿನಾಂಕ: 13ನೇ ಫೆಬ್ರವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 505 **ಕೆ. ಈಶ್ವರಸ್ವಾಮಿ**

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ನಡವಳಿಕೆಗಳು**

**ವಿಷಯ:** ನಿಷ್ಕ್ರಿಯಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹೊರಬೈಲು, ಸೊರಬ ತಾಲ್ಲೂಕ್ ಇದರ ಸಮಾಪನೆ - ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆಯ ಪತ್ರ ದಿ: 14.1.2004.

2) ಸ.ಸಂ. ಗಳ ಸಹಾಯಕ ನಿಬಂಧಕರು ಸಾಗರ ರವರ ಪತ್ರ ನಂ. ಎಆರ್.25/ಸಮಾಪನೆ/ಹಾಉಸಸಂನಿ.,/ಹೊರಬೈಲು/ಸಿಆರ್.108/2003-04/ದಿನಾಂಕ: 26.12.2003.

3) ಸ.ಸಂ. ಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ. ಎಆರ್. 25/ಸಮಾಪನೆ/5457/2003-04/ ದಿ: 4.2.2004.

**ಪ್ರಸ್ತಾವನೆ:-**

ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಹೊರಬೈಲು, ಸೊರಬ ತಾಲ್ಲೂಕ್ ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪ ವಿಭಾಗ, ಸಾಗರ ರವರ ಕಾರ್ಯಾಲಯದ ಸಂಖ್ಯೆ: ಎಆರ್-25/ಎಂಕೆಟಿ/18519/90-91/ ದಿನಾಂಕ: 31.1.1991 ರಲ್ಲಿ ನೋಂದಣಿಯಾಗಿದ್ದು, ಕಾರ್ಯವ್ಯಾಪ್ತಿ ಕುಪ್ಪೆ ಗ್ರಾಮಕ್ಕೆ ಸೀಮಿತವಾಗಿದ್ದು, ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದು, ಸಮಾಪನೆಗೊಳಿಸಲು ಉಲ್ಲೇಖ (2) ರಲ್ಲಿಯ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ರವರು ವರದಿ ಮಾಡಿರುತ್ತಾರೆ. ಈ ವರದಿಯನ್ನು ಪರಿಶೀಲಿಸಲಾಗಿ, ನೋಂದಣಿಯಾದ ಬೈಲಾದಲ್ಲಿಯ ನಿಬಂಧನೆಯಂತೆ ಕಾರ್ಯನಿರ್ವಹಿಸುತ್ತಿಲ್ಲ, ವಾರ್ಷಿಕ ಮಹಾಸಭೆ ನಡೆಸಿರುವುದಿಲ್ಲ, ಹಾಲು ಸಂಗ್ರಹಣೆ ಕಾರ್ಯ ಸ್ಥಗಿತಗೊಂಡಿದೆ ಎಂದು ದೃಢಪಟ್ಟಿದೆ.

ಈ ಮೇಲ್ಕಂಡ ನ್ಯೂನತೆಗಳ ಹಿನ್ನೆಲೆಯಲ್ಲಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಕರ್ನಾಟಕ ಸಹಕಾರ ಸಂಘಗಳ 1959ರ ಕಾಯಿದೆ ಕಲಂ 72(2) ರನ್ವಯ ಉಲ್ಲೇಖ (2)ರ ನೋಟೀಸ್ ನೀಡಲಾಗಿದ್ದು, ನೋಟೀಸ್ ಜಾರಿಗೊಳಿಸಲಾಗಿದೆ. ಈ ಸಂಘದ ಸಮಾಪನೆ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಲಿಖಿತವಾಗಿ ವಿವರಣೆ ಕೊಡಲು ಕೇಳಲಾಗಿದ್ದು, ವಿವರಣೆ ಬಂದಿರುವುದಿಲ್ಲ. ಹಾಗೂ ನೀಡಿದ ಕಾಲಾವಕಾಶ ಗತಿಸಿರುತ್ತದೆ. ಈ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ನಂ. ಡಿಆರ್ಎಸ್/ಸಮಾಪನೆ/ಡಿಎಲ್ಎಸ್/1933/2003-2004, ದಿನಾಂಕ: 13ನೇ ಫೆಬ್ರವರಿ 2004**

ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಕೆ. ಈಶ್ವರಸ್ವಾಮಿ, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ನಂ. ಸಿಎಂಡಬ್ಲ್ಯೂ/69/ಸಿಎಲ್ಎಂ:2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳಿಗಾಗಿ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಹೊರಬೈಲು, ಸೊರಬ ತಾಲ್ಲೂಕ್, ಈ ಸಂಘವನ್ನು ಸಮಾಪನೆಗೆ ಆದೇಶಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘ ಕಾಯ್ದೆ 1959ರ ಕಲಂ 73 ರನ್ವಯ ಮಾರ್ಗಾಧಿಕಾರಿ ಶಿವಮೊಗ್ಗ ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ನಿಯಮಿತ ಸೊರಬ ತಾಲ್ಲೂಕ್ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿದ್ದೇನೆ.

ಮೇಲ್ಕಂಡ ಸಮಾಪನಾಧಿಕಾರಿಯವರು ಈ ಆದೇಶದ 30 ದಿನಗಳೊಳಗಾಗಿ ಈ ಸಂಘದ ಪ್ರಭಾರವನ್ನು ವಹಿಸಿಕೊಂಡು ಸಮಾಪನಾ ನಡುವಳಿಕೆಗಳನ್ನು ನಡೆಸತಕ್ಕದ್ದು.

ಈ ಆದೇಶವನ್ನು ದಿನಾಂಕ: 13ನೇ ಫೆಬ್ರವರಿ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿದೆ.

ಪಿ.ಆರ್. 506

**ಕೆ. ಈಶ್ವರಸ್ವಾಮಿ**

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು-52**

**ವಿಷಯ:** ಸಮಾಪನೆಯಲ್ಲಿರುವ ಗೋಲ್ಡನ್ ಬರ್ಡ್ ಕೋಳಿ ಸಾಕಾಣಿಕೆದಾರರ ಸಹಕಾರ ಸಂಘ ನಿ., ಮಾಗಡಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸ.ಸಂ.ಸ.ನಿ. ರಾಮನಗರ ರವರ ಪತ್ರ ಸಂಖ್ಯೆ ಸಸಸನಿ:46:ಸಮಾಪನೆ:88:2000-01, ದಿನಾಂಕ: 1.3.2004.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಜಿ:ಆರ್:ಸಮಾಪನೆ:50:1998-99, ದಿನಾಂಕ: 25.9.1998.

**ಪ್ರಸ್ತಾವನೆ:-**

ಸಹಕಾರ ಸಂಘಗಳ ಸಹಾಯಕ ನಿಬಂಧಕರು ರಾಮನಗರ ರವರು ಉಲ್ಲೇಖ (1)ರ ಪತ್ರದಲ್ಲಿ ಗೋಲ್ಡನ್ ಬರ್ಡ್ ಕೋಳಿ ಸಾಕಾಣಿಕೆದಾರರ ಸಹಕಾರ ಸಂಘ ನಿ., ಮಾಗಡಿ ತಾಲ್ಲೂಕು ಈ ಸಂಘವು ನೋಂದಣಿ ಸಂಖ್ಯೆ ಸಸಸನಿರಾ:46:ನೋಂದಣಿ:20888:95-96 ದಿನಾಂಕ: 31.8.1995 ರಲ್ಲಿ ನೋಂದಣಿಯಾಗಿದ್ದು, ಸಂಘವು ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡ ಕಾರಣ ಸಂಘವು ಸಮಾಪನೆಗೊಂಡಿದ್ದು, ಸಂಘದಿಂದ ಸದಸ್ಯರಿಗೆ ಯಾವುದೇ ಅನುಕೂಲವಾಗದೇ ಇರುವ ಪ್ರಯುಕ್ತ ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಸಂಘವು 1995-96ನೇ ಸಾಲಿನಿಂದ ಯಾವುದೇ ರೀತಿಯ ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಉಲ್ಲೇಖ (2)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಮಾಗಡಿ ರವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಈ ಸಂಘದಲ್ಲಿ ರೂ. 790.00 ಜವಾಬ್ದಾರಿ ಇದ್ದು, ಸರ್ಕಾರದಿಂದ ಸಾಲ, ಷೇರು ಮಂಜೂರಾಗಿರುವುದಿಲ್ಲ, ಸಮಾಪನಾಧಿಕಾರಿಯವರು ಬೆಂಗಳೂರು ಜಿಲ್ಲಾ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್, ಮಾಗಡಿ ಶಾಖೆ ಇಲ್ಲಿ ಅಮಾನತ್ ಖಾತೆಯಲ್ಲಿರುವ ರೂ. 500.00 ಗಳನ್ನು ಉಪನಿಬಂಧಕರ ಪಿ.ಡಿ. ಖಾತೆಗೆ ವರ್ಗಾಯಿಸಿ, ದಿನಾಂಕ: 20.2.2004 ರಂದು ಸಭೆ ನಡೆಸಿ, ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಲು ತೀರ್ಮಾನಿಸಿರುತ್ತಾರೆ. ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ**

**ಕ್ರಮಾಂಕ: ಡಿಆರ್‌ಬಿ:ಆರ್:ಸಮಾಪನೆ:50:2003-04, ದಿನಾಂಕ: 24ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:65:ಸಿಎಲ್‌ಎಂ:2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಶ್ರೀ ಭೀಮಸೇನ ಬಂಕದ, ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಗೋಲ್ಡನ್ ಬರ್ಡ್ ಕೋಳಿ ಸಾಕಾಣಿಕೆದಾರರ ಸಹಕಾರ ಸಂಘ ನಿ., ಮಾಗಡಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 24.3.2004 ರಂದು ಹೊರಡಿಸಿರುತ್ತೇನೆ.

ಪಿ.ಆರ್. 507

ಸಹಕಾರ ಸಂಘಗಳ ಉಪ-ನಿಬಂಧಕರು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಮಾನ್ಯ ಸಿ.ಎಂ.ಎಂ. ನ್ಯಾಯಾಲಯಕ್ಕೆ, ಬೆಂಗಳೂರು ನಗರ**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ಮಾನ್ಯ ನ್ಯಾಯಾಲಯದಲ್ಲಿ ನಿವೇದಿಸಿಕೊಳ್ಳುವುದೇನೆಂದರೆ, ದಿನಾಂಕ: 24.4.2002 ರಂದು ಆರೋಪಿಗಳಾದ (1) ಸಂತೋಷ್ S/o. ಥಾಮಸ್ 15 ವರ್ಷ (2) ಕುಮಾರ @ ರಾಜೇಶ S/o. ಏಳುಮಲೈ 14 ವರ್ಷ ಇವರುಗಳನ್ನು ದಸ್ತಗಿರಿ ಮಾಡಿ ಒಟ್ಟು 9 ಸೈಕಲ್‌ಗಳನ್ನು ಅಮಾನತ್ತುಪಡಿಸಿಕೊಂಡು PF No. 59/02 ರಲ್ಲಿ ನಮೂದಿಸಲಾಗಿದೆ. ಸದರಿ ಸೈಕಲ್‌ಗಳು ಸುಮಾರು 2 ವರ್ಷಗಳಿಂದ ಮಳೆಯಲ್ಲಿ ನೆನೆದು, ಬಿಸಿಲಿನಲ್ಲಿ ಒಣಗಿ ಅರ್ಧ ಹಾಳಾಗಿವೆ. ಇನ್ನು ಕೆಲವು ತಿಂಗಳುಗಳು ಇದೇ ರೀತಿ ಒಣಗಿದರೆ ಪೂರ್ಣವಾಗಿ ಹಾಳಾಗುವ ಸಾಧ್ಯತೆಗಳಿರುತ್ತದೆ. ಸದರಿ ಸೈಕಲ್‌ಗಳು ಈ ಕೆಳಕಂಡಂತೆ ಇರುತ್ತವೆ.

1. ಒಂದು ಹಸಿರು ಬಣ್ಣದ ಅಟ್ಲಾಸ್ ಸೈಕಲ್
2. ಒಂದು ಕಪ್ಪು ಬಣ್ಣದ ಅಟ್ಲಾಸ್ ಸೈಕಲ್
3. ಒಂದು ಹಸಿರು ಬಣ್ಣದ ಹರ್ಕ್ಯೂಲಸ್ ಸೈಕಲ್
4. ಒಂದು ಹಸಿರು ಬಣ್ಣದ ಅಟ್ಲಾಸ್ ಸೈಕಲ್
5. ಒಂದು ಕಪ್ಪು ಬಣ್ಣದ ಅಟ್ಲಾಸ್ ಸೈಕಲ್
6. ಒಂದು ನೀಲಿ ಮತ್ತು ಕೆಂಪು ಬಣ್ಣ ಮಿಶ್ರಿತ ಹೀರೋ ಸೈಕಲ್
7. ಒಂದು ನೇರಳೆ ಮತ್ತು ಕೆಂಪು ಬಣ್ಣ ಮಿಶ್ರಿತ ಹೀರೋ ಸೈಕಲ್
8. ಕಪ್ಪು ಬಣ್ಣದ ಹರ್ಕ್ಯೂಲಸ್ ಸೈಕಲ್
9. ಒಂದು ಕೆಂಪು ಬಣ್ಣದ ಚಿಕ್ಕ ಸ್ಪೀಡ್ ಕಿಂಗ್ ಸೈಕಲ್

ಈ ಸೈಕಲ್‌ಗಳನ್ನು ಠಾಣೆಯ ಆವರಣದಲ್ಲಿ ಬಹಿರಂಗ ಹರಾಜು ಮಾಡಿ, ಬಂದ ಹಣವನ್ನು ಸರ್ಕಾರಕ್ಕೆ ಭರಿಸಲು ಅನುಮತಿ ನೀಡಬೇಕೆಂದು ಮಾನ್ಯ ನ್ಯಾಯಾಲಯದಲ್ಲಿ ಮನವಿ.

ಪಿ.ಆರ್. 508

ಸಬ್ ಇನ್ಸ್‌ಪೆಕ್ಟರ್ ಆಫ್ ಪೊಲೀಸ್ (ಅಪರಾಧ ವಿಭಾಗ)
ಶೇಷಾದ್ರಿಪುರಂ ಪೊಲೀಸ್ ಠಾಣೆ, ಬೆಂಗಳೂರು-560 020.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-1,**

**ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು-2 ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್-10/04F , ದಿನಾಂಕ: 19ನೇ ಮಾರ್ಚ್ 2004**

**ಅರ್ಜಿದಾರರು:**
ಶ್ರೀಮತಿ ದೇವಕಿ ರೈ W/o. ರಮಾನಾಥ ರೈ
ಲೋಬೋ ಕಾಂಪೌಂಡ್, ಲೋವರ್ ಬೆಂದೂರ್,
ಮಂಗಳೂರು

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀ ಎಂ.ಎಂ. ಮೋನಪ್ಪ S/o. ಎಂ.ಎಂ. ಮುತ್ತಪ್ಪ
ಕುಶಾಲನಗರ, ಕೂರ್ಗ್ ಜಿಲ್ಲೆ
2. ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ.
ಕಾಫಿ ಕೃಪಾ ಬಿಲ್ಡಿಂಗ್, ಮಹಾತ್ಮಾಗಾಂಧಿ ರಸ್ತೆ, ಮರ್ಕೆರ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ದೇವಕಿ ಇವರು ತಮ್ಮ ಗಂಡನಾದ ಶ್ರೀ ಪ್ರೇಂಕನ್ನಯ್ಯ ಇವರು 1ನೇ ಪ್ರತಿವಾದಿಗಳ ವಾಹನದಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 29.1.2001 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಪಿ.ಆರ್. 509

**ಜಿ.ಆರ್. ಇಂಗಳೆ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ-1, ಮಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-1,**
**ಬೆಂದೂರ್ ವೆಲ್ ವೃತ್ತ, ಮಂಗಳೂರು-2 ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್-11/04F , ದಿನಾಂಕ: 19ನೇ ಮಾರ್ಚ್ 2004**

**ಅರ್ಜಿದಾರರು:**
1. ಶ್ರೀಮತಿ ವಿಶಾಲ W/o. ದಿ. ಕೆ. ಶಿವರಾಮ ಹೆಗಡೆ ಮತ್ತು ಇತರರು ಕುಂಟ್ಲಮಾರ್ ಹೌಸ್
2. ಕುಮಾರಿ ಅಪೇಕ್ಷ
3. ಮಾ: ಅಶಿತ್
4. ಶ್ರೀ ವೆಂಕಪ್ಪ ಹೆಗಡೆ
5. ಶ್ರೀಮತಿ ರಾಜೀವಿ ಹೆಗ್ಡೆ

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀ ಪಿ. ಮಹಮ್ಮದ್ S/o. ಉಮರಬ್ಬಬ್ಯಾರಿ ಪೆರಾರಿ ಹೌಸ್, ಮುದುಕೋಡಿ, ಬೆಳ್ತಂಗಡಿ
2. ಮೆ: ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂ. ಪ್ರಭು ಬಿಲ್ಡಿಂಗ್, ಅರುಣ ಟಾಕೀಸ್ ಬಳಿ ಪುತ್ತೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ವಿಶಾಲ ಇವರು ತಮ್ಮ ಮಗನಾದ ಶ್ರೀ ಕೆ. ಶಿವರಾಮ ಹೆಗ್ಡೆ ಇವರು 1ನೇ ಪ್ರತಿವಾದಿಗಳಾದ ಶ್ರೀ ಪಿ. ಮಹಮ್ಮದ್ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 01.11.2003 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ, ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಪಿ.ಆರ್. 510

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ-1, ಮಂಗಳೂರು.

**PROCEEDINGS OF THE REGISTRAR OF CO-OPERATIVE SOCIETIES IN KARNATAKA, BANGALORE**
**No. LDB/12/LFD/2003-04, Date: 20th March 2004**

**Sub:** Floatation of Special Development Debentures by the KSCA&RD Bank under various schemes for Rs. 7,66,62,600/- issue of orders-reg.

**Ref:**
1) Proposal No. FS/DEB/845/2003-04 Dated 19.3.2004 of the KSCA&RD Bank Ltd., Bangalore addressed to NABARD, Bangalore, forwarding the proposal for Floatation of Special Development Debentures for Rs. 7,66,62,600/- for their approval.
2) Letter No. NB/(BL)/ICD/10154/LDB-12/2003-04, Dated: 19.3.2004 of the NABARD, Bangalore addressed to the Managing Director, KSCA&RD Bank, under copy to the Registrar of Co-operative Societies in Karnataka, Bangalore conveying their approval to the proposal cited above at 1, for Rs. 7,66,62,600/-
3) Government O.M. No. FD.95.RLG:68:Dated 11.11.1971.
4) Letter No. CMW : 134 : CLS 2002, Bangalore Dated: 1.8.2003 sanctioning the Government Guarantee for Rs. 166.00 crores on behalf of the KSCA&RD Bank for the year 2003-2004.

5) Proposal No. FS/DEB/853/2003-04 dated: 20.3.2004 of the KSCA&RD Bank, addressed to this office requesting for issue of orders for the floatation of the debentures approved by the NABARD as cited in Ref. 2 above.

**PREAMBLE:**

The Karnataka State Co-operative Agriculture and Rural Development Bank Ltd., in its letter cited (1) has forwarded a proposal to the National Bank for Agriculture and Rural Development, Bangalore for floatation of Special Development Debentures under various schemes for Rs. 7,66,62,600/- and has requested them for their approval. On considering the proposal of the KARNATAKA STATE CO-OPERATIVE AGRICULTURE AND RURAL DEVELOPMENT BANK cited above at (1) the National Bank for Agriculture and Rural Development, Bangalore in their letter above at (2) has conveyed their approval for the floatation and agreed to subscribe to Special Development Debentures floated by the Bank to the extent of Rs. 7,10,30,600/-. The contribution from State Government and Central Government is to the extent of Rs. 28,16,000/- each Government in its O.M. cited above at (3) has prescribed the terms and conditions to be imposed by Government while guaranteeing the debentures to be floated by any institution. In the Government order cited above at (4), Government has issued the Government guarantee on behalf of the Karnataka State Co-operative Agriculture and Rural Development Bank for the year 2003-2004 and has authorised the Registrar of Co-operative Societies to issue order etc., upto Rs. 10.00 crores on each occasion, and to make the contribution to the debentures according to the pattern approved by the NABARD. All the relevant terms and conditions applicable to the Karnataka State Co-operative Agriculture and Rural Development Bank as per references cited above at (3) and (4) are to be followed. The Karnataka State Co-operative Agriculture and Rural Development Bank, in its letter cited at (5) has requested this office for issue of orders for floatation of debentures as approved by the National Bank for Agriculture and Rural Development vide reference cited above at (2).

**ORDER**

1. Registrar of Co-operative Societies in Karnataka, Bangalore, hereby permits the Karnataka State Co-operative Agriculture and Rural Development Bank Ltd., Bangalore, as per Government Order cited at reference (4) above, to float Special Development Debentures to the extent of Rs. 7,66,62,600/- (Rupees Seven Crores Sixty Six Lakhs Sixty Two thousand Six hundred only) limiting the amount of debentures to the value of accumulated un-encumbered mortgages secured for implementing the National Bank for Agriculture and Rural Development scheme as per the details indicated hereunder, subject to the terms and conditions stipulated in the ANNEXURE-1 to this order.
2. Sanction is hereby accorded to contribute a sum of Rs. 28,16,000/- (Rupees Twenty Eight lakhs Sixteen thousand only) being the State Government share of contribution to the various Special Development Debentures to be floated by the Karnataka State Co-operative Agriculture and Rural Development Bank Ltd., Bangalore, as approved by the National Bank for Agriculture and Rural Development vide their letter above at (2).
3. The currency for floating these debentures would be up to 31.3.2004.
4. General Manager and Manager of the Karnataka State Co-operative Agriculture and Rural Development Bank are authorised jointly to draw the amount on a payees receipt duly countersigned by the Additional Registrar of Co-operative Societies (ADM & DEV), Head Office, Bangalore.

The expenditure of Rs. 28,16,000/- (Rupees: Twenty Eight lakhs Sixteen thousand only) in this behalf towards Government of Karnataka share of contribution may be met under the budget Head "6416-Loans for Agricultural Financial Institutions-190 Loans to public sector and other undertakings-1-K.S. Co-operative Agriculture and RD Bank-01 Loans for purchase of debentures." (6416-00-190-1-01)

Registrar of Co-operative Societies,
in Karnataka, Bangalore.

PR-511

**ಒಳಾಡಳಿತ ಮತ್ತು ಸಾರಿಗೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಒಸಾಇ 177 ಪಿಆರ್‌ಇ 2003, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2003**

ಕಾರಾಗೃಹಗಳ ಇಲಾಖೆಯ ಅಧಿಕಾರಿಗಳಾದ ಶ್ರೀ ಪಿ.ಎನ್. ಜಯಸಿಂಹ, ಪ್ರಾಂಶುಪಾಲರು ಕಾರಾಗೃಹ ತರಬೇತಿ ಸಂಸ್ಥೆ, ಮೈಸೂರು ಮತ್ತು ಶ್ರೀ ನಂಜಪ್ಪ, ಸಹಾಯಕ ಅಧೀಕ್ಷಕರು, ಕೇಂದ್ರ ಕಾರಾಗೃಹ, ಪರಪ್ಪನ ಅಗ್ರಹಾರ, ಬೆಂಗಳೂರು ಇವರನ್ನು ಕ್ರಿಮಿನಲ್ ಅಪರಾಧ ಸಂಖ್ಯೆ: 1100/2002 ರಲ್ಲಿ ದಿನಾಂಕ: 9.12.2003 ರಂದು ಪೊಲೀಸ್ ಇಲಾಖೆಯವರು ಬಂಧಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(2)(ಎ) ರನ್ವಯ ದಿನಾಂಕ: 9.12.2003 ರಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರೀ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಸದರಿ ಅಧಿಕಾರಿಗಳು ನಿಲಂಬನದ ಅವಧಿಯಲ್ಲಿ ಕೇಂದ್ರ ಸ್ಥಾನವನ್ನು ಸರ್ಕಾರದ ಅನುಮತಿ ಇಲ್ಲದೆ ಬಿಡತಕ್ಕದ್ದಲ್ಲ. ಹಾಗೂ ಈ ಅಧಿಕಾರಿಗಳ ಸದರಿ ಅವಧಿಯಲ್ಲಿ ಜೀವನಾಂಶ ಭತ್ಯೆಯನ್ನು ಪಡೆಯಲು ನಿಯಮಾನುಸಾರ ಅರ್ಹರಿರುತ್ತಾರೆ.

ಪಿ.ಆರ್. 486 ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕು, ನಿಡಗಲ್ಲು ಗ್ರಾಮದಲ್ಲಿ ಅಲಂಕಾರಿಕ ಶಿಲೆಗಾಗಿ ಶ್ರೀ ಸುಧಾಕರ್ ಅಡಪ್ಪ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 458ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು 458:2002-03, 6094 ದಿನಾಂಕ: 6.3.2003.

2) ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ: ಡಿ.ಸಿ.ಬಿ: ಕಗಗು 458:2003-04: 5364 ದಿ: 12.8.2003.

**ಪ್ರಸ್ತಾವನೆ:-**

ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕು, ನಿಡಗಲ್ಲು ಗ್ರಾಮದ ಸರ್ವೆ ನಂ. 42 ರಲ್ಲಿ ಶ್ರೀ ಸುಧಾಕರ್ ಅಡಪ್ಪ ರವರಿಗೆ 3-00 ಎಕರೆಗೆ ದಿನಾಂಕ: 3.8.2001 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2) ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 78,445/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2 ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:458:2003-04/19952 ದಿನಾಂಕ: 24ನೇ ಮಾರ್ಚ್ 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ನಿಡಗಲ್ಲು ಗ್ರಾಮದ ಸರ್ವೆ ನಂ. 402 ರಲ್ಲಿ 3-00 ಎಕರೆಗೆ ಮಲ್ಟಿಕಲರ್ ಶಿಲೆಗಾಗಿ ಮಂಜೂರು ಮಾಡಲಾದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 458 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 487 **ನಿರ್ದೇಶಕರು,**

ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ

**ಮರಣ ಪ್ರಕರಣ ಸಂಖ್ಯೆ: ಕಾಆ : ಕಾನಪ : 22:2004, ದಿನಾಂಕ: 8ನೇ ಮಾರ್ಚ್ 2004**

| **ಅರ್ಜಿದಾರರು:** | ವಿರುದ್ಧ | **ಪ್ರತಿವಾದಿಗಳು:** |
|---|---|---|
| ಬೌವಾರವ್ವಾ ಬೈರಪ್ಪಾ ಕೋಳಿ, | | 1. ಹರಿಶ್ಚಂದ್ರ ಮಹಾದೇವ ಕಾಂಬಳೆ |
| ವಾಸ: ಧರಿ ಬಡಚಿ ತಾ: ಜಿತ್ತ, | | ವಾಸ: ಧರಿ ಬಡಚಿ ತಾ: ಜಿತ್ತ ಜಿಲ್ಲೆ: ಸಾಂಗಲಿ |
| ಸಾಂಗಲಿ ಹಾಗೂ ಇತರೆ 5 ಜನರು | | 2. ಡಿವಿಜನಲ್ ಮ್ಯಾನೇಜರ್ ಓರಿಯಂಟಲ್ ಇನ್ಸೂರೆನ್ಸ್ |
| | | ಕಂ. ಲಿ. ಮಿನಿ ವಿಧಾನ ಸೌಧ, ಗುಲ್ಬರ್ಗಾ |

**ಅಧಿಸೂಚನೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಬೈರಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 2.3.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ಬೌವರವ್ವಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ

ಅರ್ಜಿ ಅಥವಾ ಆಕ್ಷೇಪಣೆಗಳು ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಪಿ.ಆರ್. 488

ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅ : ಕಾನಪ : 23:2004, ದಿನಾಂಕ: 8ನೇ ಮಾರ್ಚ್ 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ನಾಮದೇವ ಬಜರಂಗ ಪಾಟೀಲ,
ವಾಸ: ಅವಾಂದಿ ತಾ: ಜಿತ್ತ, ಜಿಲ್ಲೆ: ಸಾಂಗಲಿ
(ಹಾಗೂ ಇತರೆ ಒಬ್ಬರು)

1. ಬಬನ ನಾಮದೇವ ಪಾಟೀಲ,
   ವಾಸ: ಅವಾಂದಿ ತಾ: ಜಿತ್ತ, ಜಿಲ್ಲೆ: ಸಾಂಗಲಿ
   (ಮಹಾರಾಷ್ಟ್ರ ರಾಜ್ಯ)
2. ದಿ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ.
   ಎಸ್.ಎಸ್. ಫ್ರಂಟ್ ರೋಡ್, ಬಿಜಾಪುರ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ವಸಂತ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 24.2.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ವಾರಸುದಾರರಾದ ನಾಮದೇವ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಅರ್ಜಿ ಅಥವಾ ಆಕ್ಷೇಪಣೆಗಳು ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಪಿ.ಆರ್. 489

ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಪ್ರಕಟಣೆ**

**ಮರಣ ಪ್ರಕರಣ ಸಂಖ್ಯೆ: ಕಾಅ : ಕಾನಪ : 38:2004, ದಿನಾಂಕ: 18ನೇ ಮಾರ್ಚ್ 2004**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

ನಾಮದೇವ ಬಜರಂಗ ಪಾಟೀಲ
ವಾಸ: ಅವಾಂದಿ ತಾ: ಜಿತ್ತ, ಜಿಲ್ಲಾ : ಸಾಂಗಲಿ

1. ಬಬನ ನಾಮದೇವ ಪಾಟೀಲ,
   ವಾಸ: ಅವಾಂದಿ ತಾ: ಜಿತ್ತ ಜಿಲ್ಲೆ: ಸಾಂಗಲಿ,
   (ಮಹಾರಾಷ್ಟ್ರ ರಾಜ್ಯ)
2. ದಿ ಡಿವಿಜನಲ್ ಮ್ಯಾನೇಜರ್,
   ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ.
   ಶಿವಾಜಿ ರೋಡ್, ಮೀರಜ್ (ಎಸ್.ಎಸ್.
   ಫ್ರಂಟ್ ರೋಡ್, ಬಿಜಾಪುರ ಮುಖಾಂತರ)

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ವಸಂತ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 24.2.2004 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ವಾರಸುದಾರರಾದ ನಾಮದೇವ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಅರ್ಜಿ ಅಥವಾ ಆಕ್ಷೇಪಣೆಗಳು ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಪಿ.ಆರ್. 490

ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ

### ಪ್ರಕಟಣೆ

**ಮರಣ ಪ್ರಕರಣ ಸಂಖ್ಯೆ: ಕಾಅ : ಕಾನಪ : 28:2004, ದಿನಾಂಕ: 10ನೇ ಮಾರ್ಚ್ 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಶ್ರೀಮತಿ ಸಂಗೀತಾ ದ್ಯಾನೇಶ್ವರ ಗೇವಡೆ,
ಉಕ್ಕಲಿ ತಾ: ಜಿಲ್ಲೆ: ಬಿಜಾಪುರ

1) ಶ್ರೀ ತಾಜುದ್ದೀನ ಸೌಪುದ್ದೀನ ಶೇಖ, ಮೀರಿ,
ಬಗಾಮಪೂರ ತಾ: ಮೊಹಲ, ಜಿಲ್ಲೆ: ಸೊಲ್ಲಾಪೂರ
2) ದಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ
ಗೋಡೇಶ್ವರ, ಬೇಗಮಪೂರ ಮೊಹಲ
ತಾ: ಜಿಲ್ಲೆ: ಬಿಜಾಪೂರ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ದ್ಯಾನೇಶ್ವರ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 11.9.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ಸಂಗೀತಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಪಿ.ಆರ್. 491

ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ

### ಪ್ರಕಟಣೆ

**ಮರಣ ಪ್ರಕರಣ ಸಂಖ್ಯೆ: ಕಾಅ : ಕಾನಪ : 29:2004, ದಿನಾಂಕ: 10ನೇ ಮಾರ್ಚ್ 2004**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ಶ್ರೀಮತಿ ನೂರಜಾಹಾನ ಸಲೀಮ ನದಾಫ,
ವಾಸ: ಜೆ.ಎಂ. ರೋಡ್, ಬಿಜಾಪೂರ
ಹಾಗೂ ಇತರೆ 6 ಜನರು

1) ಜಾವೇದ ಗಫಾರ ಮುಲ್ಲಾ,
ವಾಸ: 425, ಗೋನಭಾಗ, ಮಾರುತಿರೋಡ್,
ಸಾಂಗಲಿ, ಜಿಲ್ಲೆ: ಸಾಂಗಲಿ.
2) ದಿ ಬ್ರ್ಯಾಂಚ್ ಮ್ಯಾನೇಜರ್, ನ್ಯೂ ಇಂಡಿಯಾ
ಅಶ್ಯೂರೆನ್ಸ್ ಕಂ. ಲಿ. ಮೀರಜ್ ರೋಡ್ ಸಾಂಗಲಿ.
3) ಲಕ್ಷ್ಮಣ ಶಂಕರ್ ನಾಯಿಕ,
ವಾಸ: ಮಡ್ಡಿ ಮನ್ನೂರು, ತಾ: ಸಿಂಧಗಿ,
ಜಿಲ್ಲೆ: ಬಿಜಾಪೂರ
4) ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ. ಬಿಜಾಪೂರ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಮೀರ ಸಲೀಮ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 29.8.2002 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ಶ್ರೀಮತಿ ನೂರಜಹಾನ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಅರ್ಜಿ ಅಥವಾ ಆಕ್ಷೇಪಣೆ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

ಪಿ.ಆರ್. 492

ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪುರ.

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಕೆಗಳು

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳಬೇಕುಪ್ಪೆ ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ ಡಾ: ಟಿ.ಎನ್. ಮೀನಾ ರವರಿಗೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 229 ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು 229: 2002-03:135, ದಿನಾಂಕ: 8.4.2003.
2) ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ:ಕಗಗು:229: 2003-04:5694, ದಿ: 21.8.2003.

**ಪ್ರಸ್ತಾವನೆ:-**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳಬೇಕುಪ್ಪೆ, ಗ್ರಾಮದ ಸರ್ವೆ ನಂ. 421 ರಲ್ಲಿ ಡಾ: ಟಿ.ಎನ್. ಮೀನಾ ರವರಿಗೆ 7.20 ಎಕರೆಗೆ ದಿನಾಂಕ: 6.1.1999 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2) ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 5,38,927/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2 ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಸಂಖ್ಯೆ: ಗಭೂಇ:ಡಿಸಿಬಿ:ಕಗಗು:229:2003-04/20152, ದಿನಾಂಕ: 27ನೇ ಮಾರ್ಚ್ 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಮರಳಬೇಕುಪ್ಪೆ ಗ್ರಾಮದ ಸರ್ವೆ ನಂ. 421 ರಲ್ಲಿ 7.20 ಎಕರೆಗೆ ಮಲ್ಟಿಕಲರ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 229 ನ್ನು ತಕ್ಷಣದಿಂದ ಲ್ಯಾಪ್ಸ್‌ಡ್ ಲೀಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

**ನಿರ್ದೇಶಕರು**

ಪಿ.ಆರ್. 512 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಕೆಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಸಾಲಬನ್ನಿ ಗ್ರಾಮದಲ್ಲಿ ಅಲಂಕಾರಿಕ ಶಿಲೆಗಾಗಿ ಹೆಚ್.ಎಂ. ರಾಮು ರವರಿಗೆ ರವರಿಗೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 478 ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1) ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು 478: 2002-03:3134, ದಿನಾಂಕ: 26.9.2002.
2) ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉಖನಿ:ಡಿಸಿಬಿ:ಕಗಗು:478: 2003-04:17037, ದಿ: 8.1.2004.

**ಪ್ರಸ್ತಾವನೆ:-**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಸಾಲಬನ್ನಿ ಗ್ರಾಮದ ಸರ್ವೆ ನಂ. 18 ರಲ್ಲಿ ಹೆಚ್.ಎಂ. ರಾಮು ರವರಿಗೆ 5.00 ಎಕರೆಗೆ ದಿನಾಂಕ: 9.11.2001 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಪತ್ರಗಳಡಿಯಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ, 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 1,08,080.00 ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2 ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಸಂಖ್ಯೆ: ಗಭೂಇ:ಡಿಸಿಬಿ:ಕಗಗು:478:2003-04/20143, ದಿನಾಂಕ: 27ನೇ ಮಾರ್ಚ್ 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಸಾಲಬನ್ನಿ ಗ್ರಾಮದ ಸರ್ವೆ ನಂ. 18 ರಲ್ಲಿ 5.00 ಎಕರೆಗೆ ಅಲಂಕಾರಿಕ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 478 ನ್ನು ತಕ್ಷಣದಿಂದ ಲ್ಯಾಪ್ಸ್‌ಡ್ ಲೀಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

**ನಿರ್ದೇಶಕರು**

ಪಿ.ಆರ್. 513 ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ. ಎಸ್‌ಡಿಕೆ: 541: ಡಿಟಿಸಿಆರ್: 2002-03, ದಿನಾಂಕ: 10ನೇ ಮಾರ್ಚ್ 2004**

**ಉಪಸ್ಥಿತರು:** ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ. ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು** **ವಿರುದ್ಧ** **ಆರೋಪಿಗಳು**

ಅಬಕಾರಿ ಉಪ ನಿರೀಕ್ಷಕರು,
ಬಂಟ್ವಾಳ ಉಪ ವಿಭಾಗ, ಬಂಟ್ವಾಳ

ಪರಾರಿಯಾಗಿರುತ್ತಾರೆ.

**ವಾಹನ ಮಾಲೀಕರು:**
ಶ್ರೀ ಅಬ್ದುಲ್ ರಜಾಕ್ ಬಿನ್ ಅಬೂಬಕರ್,
ಮುರಬೈಲು, ಕಲಡ್ಕ ಪೋಸ್ಟ್,
ಗೋಳ್ತಮಜಲು ಬಂಟ್ವಾಳ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 20.3.2003 ರಂದು ಬಂಟ್ವಾಳದ ಉಪ ವಿಭಾಗದ ಅಬಕಾರಿ ನಿರೀಕ್ಷಕರು ಬಂಟ್ವಾಳ ತಾಲ್ಲೂಕು, ಮಾಣಿ ಗ್ರಾಮದ ಮಾಣಿ ರಾಷ್ಟ್ರೀಯ ಹೆದ್ದಾರಿಯ 48 ರಲ್ಲಿ ತಮ್ಮ ಸಿಬ್ಬಂದಿಯವರೊಂದಿಗೆ ಕೂಡಿಕೊಂಡು ದೊರೆತ ಖಚಿತ ವರ್ತಮಾನದ ಮೇರೆಗೆ ಬೆಳಗ್ಗಿನ ಜಾವ ಸುಮಾರು 5.00 ಗಂಟೆಗೆ ಬೆಂಗಳೂರು ಕಡೆಯಿಂದ ಏರುಮುಖ ರಸ್ತೆಯಲ್ಲಿ ಸರಕುಗಳನ್ನು ತುಂಬಿದ ಹಾಗೆಯೇ ಟ್ಯಾಂಕರ್ ಲಾರಿಯು ಬರುವುದನ್ನು ಗಮನಿಸಿ, ನಿಲ್ಲಿಸುವಂತೆ ಸೂಚನೆ ನೀಡಿದ್ದಾಗ ಚಾಲಕ ಟ್ಯಾಂಕರು ಲಾರಿಯನ್ನು ಸ್ವಲ್ಪ ಮುಂದೆ ಚಲಾಯಿಸಿ ರಸ್ತೆಯ ಬದಿಯಲ್ಲಿ ನಿಲ್ಲಿಸಿ, ಟ್ಯಾಂಕರ್ ಲಾರಿಯಿಂದ ಇಳಿದು ಕಾಲೇಜು ಕಡೆಗೆ ಕತ್ತಲೆಯಲ್ಲಿ ಓಡಿ ಪರಾರಿಯಾಗಿರುತ್ತಾನೆ. ಸದರಿ ಚಾಲಕನನ್ನು ಹಿಡಿಯಲು ಪ್ರಯತ್ನಿಸಿದರೂ ಅದು ಫಲಕಾರಿಯಾಗಿರುವುದಿಲ್ಲ. ನಂತರ ಪಂಚರ ಸಮಕ್ಷಮ ಟ್ಯಾಂಕರು ಲಾರಿಯನ್ನು ಕೂಲಂಕುಷವಾಗಿ ತೆರೆದು ಪರಿಶೀಲಿಸಿದಾಗ ಟ್ಯಾಂಕರಿನ ಒಳಗಡೆ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳು ಇರುವುದು ಕಂಡುಬಂತು. ಸದರಿ ರಟ್ಟಿನ ಪಟ್ಟಿಗೆಗಳನ್ನು ಪರಿಶೀಲಿಸಿದಾಗ ಈ ಕೆಳಗಿನಂತಿರುತ್ತದೆ.

| ಕ್ರ.ಸಂ. | ಮದ್ಯದ ವಿವರ | 750 ಎಂಎಲ್ | 375 ಎಂಎಲ್ | 180 ಎಂಎಲ್ | ಪೆಟ್ಟಿಗೆಗಳು | ಲೀಟರ್‌ಗಳಲ್ಲಿ |
|---|---|---|---|---|---|---|
| 1 | ಬ್ಯಾಗ್ ಪೈಪರ್ ವಿಸ್ಕಿ | 840 | - | - | 70 | 630.000 |
| 2 | ಬ್ಯಾಗ್ ಪೈಪರ್ ವಿಸ್ಕಿ | - | 840 | - | 35 | 315.000 |
| 3 | ಬ್ಯಾಗ್ ಪೈಪರ್ ವಿಸ್ಕಿ | - | - | 3888 | 81 | 699.840 |
| 4 | ನಂ.1 ಮೆಕ್‌ಡೊವೆಲ್ ವಿಸ್ಕಿ | 120 | - | - | 10 | 90.000 |
| 5 | ನಂ.1 ಮೆಕ್‌ಡೊವೆಲ್ ವಿಸ್ಕಿ | - | 240 | - | 10 | 90.000 |
| 6 | ನಂ.1 ಮೆಕ್‌ಡೊವೆಲ್ ವಿಸ್ಕಿ | - | - | 480 | 10 | 86.400 |
| 7 | ನಂ.1 ಮೆಕ್‌ಡೊವೆಲ್ ಬ್ರಾಂಡಿ | - | - | 432 | 9 | 77.760 |
| 8 | ಖೋಡೇಸ್ XXX ರಂ | - | - | 1440 | 30 | 259.200 |
| 9 | ನಂ.1 ಮೆಕ್‌ಡೊವೆಲ್ XXX ರಂ | - | - | 240 | 5 | 43.200 |
| | **ಒಟ್ಟು** | **960** | **1080** | **6480** | **260** | **2291.400** |

ಕ್ರಮ ಸಂಖ್ಯೆ 1 ರಿಂದ 9 ರವರೆಗಿನ ಸೊತ್ತುಗಳಿಂದ ಒಂದೊಂದು ಮದ್ಯ ತುಂಬಿದ ಶೀಷೆಗಳನ್ನು ತೆಗೆದು ಅದರ ಬೆಗಡೆಗೆ ಬಿಳಿ ಬಟ್ಟೆಯಿಂದ ಸುತ್ತಿ, ಅರಗು ಹಾಕಿ ಸೀಲು ಮಾಡಿ, ಪಂಚರ ಸಹಿ ಇರುವ ಚೀಟಿಯನ್ನು ಅಂಟಿಸಿರುತ್ತಾರೆ. ಅಕ್ರಮವಾಗಿ ಸಾಗಾಣಿಕೆಗೆ ಉಪಯೋಗಿಸಿದ ಟ್ಯಾಂಕರ್ ಲಾರಿ ಸಂ: ಕೆಎ-20-1249 ಆಗಿದ್ದು ಇದರ ಇಂಜಿನ್ ನಂ. 692 ಡಿ-02, 408919 ಮತ್ತು ಚಾಸೀಸ್ ನಂ. 344052395298 ಆಗಿರುತ್ತದೆ. ಹಾಗೂ ಇದು 1990ನೇ ಮಾಡಲ್ ಆಗಿರುತ್ತದೆ.

ಈ ರೀತಿ ಅಕ್ರಮ ಸಾಗಾಟ ಮಾಡುವುದು ಅಬಕಾರಿ ಕಾನೂನು ಪ್ರಕಾರ ಅಪರಾಧವೆಂದು ತಿಳಿದು ಮೊಕದ್ದಮೆ ಸಂಖ್ಯೆ: 30/2002-03 ದಿನಾಂಕ: 20.3.2003ರ ಮೂಲಕ ಮೊಕದ್ದಮೆ ದಾಖಲಿಸಿ ಪ್ರಥಮ ಮಾಹಿತಿ ವರದಿಯನ್ನು, ಮಹಜರನ್ನು ನ್ಯಾಯಾಲಯಕ್ಕೂ ಮತ್ತು ಪ್ರಾಧಿಕಾರಕ್ಕೂ ಸಲ್ಲಿಸಿ, ಪ್ರಾಧಿಕಾರದ ಅನುಮತಿಯೊಂದಿಗೆ ಪ್ರಕರಣವನ್ನು ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರು ಪ್ರಕರಣದ ತನಿಖೆಯನ್ನು ಕೈಗೊಂಡು ಪ್ರಕರಣದ ಮಾದರಿ ಶೀಷೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ರಾಸಾಯನಿಕ ತಜ್ಞರ ವರದಿಯನ್ನು ಪಡೆದು ರಾಸಾಯನಿಕ ತಜ್ಞರ ವರದಿಯಂತೆ ಮದ್ಯವು 25 ಯು.ಪಿ. ತೀಕ್ಷ್ಣತೆ ಹೊಂದಿದ್ದು ಮಾನವ ಸೇವನೆಗೆ ಯೋಗ್ಯವಾಗಿದ್ದರಿಂದ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿ ವಿಲೇವಾರಿ ಮಾಡಲು ಮಾಡಿದ ಶಿಫಾರಸ್ಸಿನಂತೆ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿಗೆ ದಿನಾಂಕ: 30.5.2003 ರಂದು ಪ್ರಾಧಿಕಾರವು ಆದೇಶ ನೀಡಿರುತ್ತದೆ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನ ಟ್ಯಾಂಕರಿನ ವಾರಸುದಾರರನ್ನು ಪತ್ತೆ ಹಚ್ಚಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರಿಗೆ ಅಬಕಾರಿ ಉಪ ನಿರೀಕ್ಷಕರು, ವಿಟ್ಲ ಉಪ ವಲಯರವರು ಪತ್ರ ಬರೆಯಲಾಗಿದ್ದು ಸದ್ರಿ ಪತ್ರಕ್ಕೆ ಉತ್ತರವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರು ವಾಹನದ "ಬಿ" ಎಕ್ಸ್‌ಟ್ರ್ಯಾಕ್ಟನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದರಿ

"ಬಿ" ಎಕ್ಸ್‌ಟ್ರ್ಯಾಕ್ಟ್ ಪ್ರಕಾರ ವಾಹನದ ಮಾಲೀಕರು ಶ್ರೀ ಅಬ್ದುಲ್ ರಜಾಕ್ ಬಿನ್ ಅಬೂಬಕರ್, ಮುರಬೈಲು, ಕಲಡ್ಕ ಪೋಸ್ಟ್, ಗೋಳ್ತಮಜಲು ಬಂಟ್ವಾಳರವರು ಆಗಿದ್ದು ಸದ್ರಿ ವಾಹನ ಮಾಲೀಕರಿಗೆ ಪ್ರಾಧಿಕಾರವು ದಿನಾಂಕ: 7.1.04 ರಂದು ಕಾರಣ ಕೇಳಿ ನೋಟೀಸು ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೀಡಿದ್ದ ನೋಟೀಸು ದಿನಾಂಕ: 12.1.04 ರಂದು ವಾಹನ ಮಾಲೀಕರಿಗೆ ತಲುಪಿದ ಸ್ವೀಕೃತಿಯು ಪ್ರಾಧಿಕಾರಕ್ಕೆ ತಲುಪಿರುತ್ತದೆ. ವಾಹನ ಮಾಲೀಕರು ನೋಟೀಸು ತಲುಪಿ 2 ತಿಂಗಳು ಕಳೆದಿದ್ದರೂ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಬಿಡುಗಡೆಗೆ ಕೋರಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣ ದಾಖಲು ಮಾಡುವಾಗ ಅಪರಾಧಿ ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳಿಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಸ್ವತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿವೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರಾಗದೇ ಇದ್ದಲ್ಲಿ ಸದ್ರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ಸ್ವತ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಪ್ರಾಧಿಕಾರವು ಮದ್ಯ ಸಾಗಣೆಗೆ ಬಳಸಿದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣವನ್ನು ದಾಖಲುಪಡಿಸಿ ಸುಮಾರು 11 ತಿಂಗಳು ಕಳೆದಿದ್ದರೂ ಜಪ್ತುಪಡಿಸಲಾಗಿರುವ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಿ ನೋಟೀಸು ಸ್ವೀಕೃತಿಗೊಂಡು 2 ತಿಂಗಳು ಕಳೆದಿದ್ದರೂ ವಾಹನವು ತಮ್ಮದೆಂದು ಕೋರಿ ವಾಹನದ ಬಿಡುಗಡೆಗೆ ಕೋರಿ ಪ್ರಾಧಿಕಾರದ ಮುಂದೆ ವಾಹನ ಮಾಲೀಕರು ಹಾಜರಾಗಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ದಿನಾಂಕ: 20.3.2003 ರಂದು ಆರೋಪಿಗಳು 2291.400 ಲೀಟರ್ ಭಾರತೀಯ ತಯಾರಿಕಾ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದಾಗ ಬಂಟ್ವಾಳ ಉಪ ವಿಭಾಗದ ಅಬಕಾರಿ ಉಪ ನಿರೀಕ್ಷಕರು ಸ್ಥಳ ಮಹಜರಿನೊಂದಿಗೆ ಅಕ್ರಮ ಸ್ವತ್ತುಗಳನ್ನು ಹಾಗೂ ಸಾಗಣೆಗೆ ಉಪಯೋಗಿಸಲಾದ ವಾಹನವನ್ನು ವಶಪಡಿಸಿಕೊಂಡಿರುತ್ತಾರೆ. ಜಪ್ತುಪಡಿಸಿದ ದ್ರವ್ಯವು ರಾಸಾಯನಿಕ ತಜ್ಞರ ವರದಿಯ ಪ್ರಕಾರ ಮದ್ಯವೆಂದು ದೃಢಪಟ್ಟಿದ್ದು, ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಣೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ, ಮತ್ತು ವಾಹನವನ್ನು ಅಬಕಾರಿ ಕಾಯ್ದೆ ಉಲ್ಲಂಘನೆಗೆ ಬಳಸಿರುವುದು ಸ್ಪಷ್ಟವಾಗಿರುತ್ತದೆ.

ಅಲ್ಲದೆ ಪ್ರಕರಣವನ್ನು ದಾಖಲುಪಡಿಸಿ ಈಗಾಗಲೇ 11 ತಿಂಗಳು ಕಳೆದಿದ್ದರೂ ಹಾಗೂ ಈ ಪ್ರಾಧಿಕಾರವು ನೀಡಲಾಗಿದ್ದ ಕಾರಣ ಕೇಳಿ ನೋಟೀಸನ್ನು ವಾಹನ ಮಾಲೀಕರು ಸ್ವೀಕರಿಸಿ ಸುಮಾರು 2 ತಿಂಗಳು ಕಳೆದಿದ್ದರೂ, ಈವರೆಗೂ ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವು ತನ್ನದೆಂದು ಅದರ ಬಿಡುಗಡೆಗೆ ಕೋರದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತಮ್ಮ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಚಟುವಟಿಕೆಗೆ ಬಳಸಿರುತ್ತಾರೆಂದು ಪ್ರಾಧಿಕಾರವು ಭಾವಿಸಬೇಕಾಗುತ್ತದೆ. ಹಾಗೂ ಈ ಪ್ರಕರಣವನ್ನು ನಡೆಸಲು ವಾಹನ ಮಾಲೀಕರಿಗೆ ಯಾವುದೇ ಉತ್ಸಾಹ ಇಲ್ಲವೆಂದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಮೇಲಿನ ಪರಾವೆಗಳಿಂದ ಹಾಗೂ ಪ್ರಾಧಿಕಾರದ ಮುಂದೆ ಲಭ್ಯವಿರುವ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಮೇಲ್ನೋಟಕ್ಕೆ ಸಾಬೀತಾಗಿದ್ದು ಸದರಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಸದರಿ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನ ಟ್ಯಾಂಕರ್ ಲಾರಿ ಸಂ: ಕೆಎ-20-1249ನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಸಿ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವುದರಿಂದ ಈ ಕೆಳಗಿನ ಆದೇಶ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ) ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಎ)2 ರನ್ವಯ ಅಬಕಾರಿ ಉಪ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳರವರ ಮೊಕದ್ದಮೆ ಸಂಖ್ಯೆ: 30/2002-03 ದಿನಾಂಕ: 20.3.2003 ರಲ್ಲಿ ಜಪ್ತುಪಡಿಸಿರುವ ವಾಹನ ಟ್ಯಾಂಕರ್ ಲಾರಿ ಸಂ:ಕೆಎ-20-1249ನ್ನು ಕರ್ನಾಟಕ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 10.3.2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಪಿ.ಆರ್. 514

**ಎನ್.ಎಂ. ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,

ದ.ಕ. ಜಿಲ್ಲೆ, ಮಂಗಳೂರು.

## ಅಧೀಕ್ಷಕ ಅಭಿಯಂತರವರ ಕಛೇರಿ, ಕೃಷ್ಣ ಭಾಗ್ಯ ಜಲ ನಿಗಮ ನಿಯಮಿತ, ನಿಮಪೋ. ವೃತ್ತ-1
## ನಾರಾಯಣಪುರ, ತಾ: ಸುರಪೂರು, ಜಿಲ್ಲಾ: ಗುಲ್ಬರ್ಗಾ

### ಅಧಿಸೂಚನೆ

**ಸಂ: ಕೃಭಾಜನಿ(ನಿ):ಅಅನಾ:ನಿಮಪೋವೃ-1:ಯೋಶಾ-2: 2003-04/3088, ದಿನಾಂಕ: 17ನೇ ಫೆಬ್ರವರಿ 2004**

ಕೃಷ್ಣಾ ಮೇಲ್ದಂಡೆ ಯೋಜನೆಯ ನಾರಾಯಣಪುರ ಎಡದಂಡೆ ಕಾಲುವೆಯ ವಿತರಣಾ ಕಾಲುವೆ ಸಂ. 1 ಯು.ಎಸ್. 1, ಡಿ.ಎಸ್. 3-ಸಿ, 3-ಡಿ, ಡಿ-6, 7, 8, 9 ಮತ್ತು ಡಿ-12ಎ ಗಳಡಿಯಲ್ಲಿ ನೀರಾವರಿಗೆ ಅಧಿಸೂಚಿಸುವ ಒಟ್ಟು ಕ್ಷೇತ್ರ 1255.07 ಹೆಕ್ಟೇರ್

ಎಂದು ಈ ಮೂಲಕ 18.6.2003 ರಂದು 2003-2004ನೇ ಸಾಲಿನ ಮುಂಗಾರು ಹಂಗಾಮಿಗೆ ಜರುಗಿದ ಕೃಷ್ಣಾ ಮೇಲ್ದಂಡೆ ಯೋಜನೆಯ ನೀರಾವರಿ ಸಲಹಾ ಸಮಿತಿ ನಡುವಳಿಗಳನ್ನು ಮಾನ್ಯ ವ್ಯವಸ್ಥಾಪಕ ನಿರ್ದೇಶಕರು, ಕೃ.ಭಾ.ಜ.ನಿ.ನಿ. ಇವರ ಕಛೇರಿಯ ಅನುಮೋದನೆ ಪತ್ರ ಸಂಖ್ಯೆ: ವ್ಯ.ನಿ:91:ತಾಂತ್ರಿಕ:410:ದಿನಾಂಕ: 1/3.7.2003 ರಂತೆ ಅಧಿಸೂಚಿತ ಕ್ಷೇತ್ರವೆಂದು ಘೋಷಿಸಲಾಗಿದೆ.

ಕೃಷ್ಣಾ ಮೇಲ್ದಂಡೆ ಯೋಜನೆಯ ನಾರಾಯಣಪುರ ಎಡದಂಡೆ ಕಾಲುವೆಯ ಅಡಿಯಲ್ಲಿ 2003-2004ನೇ ಸಾಲಿನ ಮುಂಗಾರು ಹಂಗಾಮಿಗೆ ನೀರಾವರಿಯ ಅಧಿಸೂಚಿತ ಕ್ಷೇತ್ರಗಳ ಸರ್ವೆ ನಂಬರುಗಳ ವಿವರಣೆಗಳನ್ನು ಅನುಬಂಧ-1 ರಲ್ಲಿ ಲಗತ್ತಿಸಲಾಗಿದೆ.

1. ಈ ಮೇಲಿನ ವಿತರಣಾ ಕಾಲುವೆಯ ಅಡಿಯಲ್ಲಿ ಬರುವ ಜಮೀನುಗಳಿಗೆ 2003-04ನೇ ಸಾಲಿನ ಮುಂಗಾರು ಹಂಗಾಮಿನಿಂದ ನೀರಾವರಿಗೆ ನೀರು ಬಿಡಲಾಗಿರುತ್ತದೆ.
2. ನೀರಿನ ಕರಾಕರಣೆ ಕಾಲಕಾಲಕ್ಕೆ ಕರ್ನಾಟಕ ಸರಕಾರ (ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ) ಹೊರಡಿಸುವ ಆದೇಶಾನುಸಾರ ನೀರಿನ ಕರಾಕರಣೆ ಮಾಡಲಾಗುವುದು, ಹಾಗೂ ನಿಷೇಧಿತ ಬೆಳೆಗಳಾದ ಭತ್ತ, ಕಬ್ಬು, ಬಾಳೆ ಇತ್ಯಾದಿ ಬೆಳೆಗಳನ್ನು ಬೆಳೆಯದಂತೆ ನಿಷೇಧಿಸಲಾಗಿದೆ. ನಿಷೇಧಿತ ಬೆಳೆಗಳನ್ನು ಬೆಳೆದಲ್ಲಿ ಕಾನೂನಿನ ಪ್ರಕಾರ ಕ್ರಮ ಕೈಗೊಳ್ಳಲಾಗುವುದು.

ಅಧೀಕ್ಷಕ ಅಭಿಯಂತರರು,
ಕೃಭಾಜನಿ(ನಿ) ನಿಮಪೋ. ವೃತ್ತ-1, ನಾರಾಯಣಪುರ.

## ನೀರಾವರಿ ಅಧಿಕಾರಿಗಳು ಹಾಗೂ ಅಧೀಕ್ಷಕ ಅಭಿಯಂತರರು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ ಪಾಲನೆ ಮತ್ತು ಪೋಷಣೆ ವೃತ್ತ ಸಂ: 1, ನಾರಾಯಣಪುರ ಇವರ ಕಛೇರಿ ಅಧಿಸೂಚನೆ

ಕರ್ನಾಟಕ ಇರಿಗೇಷನ್ ಆಕ್ಟ್ 1980ರ ನಿಯಮ 27 ರನ್ವಯ ನಾರಾಯಣಪುರ ಎಡದಂಡೆ ಕಾಲುವೆ ತೂಬುಗಳ ಮೂಲಕ 2003ರ ಮುಂಗಾರು ಹಂಗಾಮಿನ ಬೆಳೆಗಳಿಗೆ ತಪಶೀಲು:ಬ: ಮತ್ತು :ಕ: ಗಳಲ್ಲಿ ನಮೂದಿಸಿದ ಕ್ಷೇತ್ರಗಳಿಗೆ ನೀರಾವರಿಗಾಗಿ ನೀರು ಬಿಡಲಾಗುವುದೆಂದು ಈ ಮೂಲಕ ಅಧಿಸೂಚಿಸಲಾಗಿದೆ.

ನೀರನ್ನು ಬಿಡುವ ವೇಳೆ ಮತ್ತು ಅವಧಿ ನೀರನ್ನು ಪಡೆಯುವ ಕ್ಷೇತ್ರ ಬೆಳೆಯಲು ಶಿಫಾರಸ್ಸು ಮಾಡಿದ ಬೆಳೆಗಳು, ಬೆಳೆಗಳನ್ನು ಬಿತ್ತುವ ಕಾಲ ಮತ್ತು ಬೆಳೆಗಳ ಅವಧಿ ಮತ್ತು ಬೆಳೆಯಲು ನಿಷೇಧಿಸಲ್ಪಟ್ಟ ಬೆಳೆಗಳು ಈ ಕೆಳಗಿನಂತಿವೆ.

1) ಕಾಲುವೆಯಲ್ಲಿ ನೀರು ಬಿಡುವ ವೇಳೆ 01-07-2003
   ಅ) ಮುಂಗಾರು ಬೆಳೆಗಾಗಿ ದಿನಾಂಕ: 01-07-2003 ರಿಂದ 110 ದಿನಗಳವರೆಗೆ ನೀರನ್ನು ವಿತರಣೆ ಮಾಡಲಾಗುತ್ತದೆ.
   ಬ) ಎರಡು ಋತು (ದೀರ್ಘಾವಧಿ) ಬೆಳೆಗಳಿಗೆ ಹಿಂಗಾರು ಋತುವಿನಲ್ಲಿ ನೀರಿನ ವಿತರಣೆ ಮುಂದುವರೆಸಲಾಗುವುದು.
2) ನೀರು ಒದಗಿಸುವ ಅವಧಿ.
   ಪ್ರತ್ಯೇಕವಾದ ಪಟ್ಟಿ ತಯಾರಿಸಿ ಕಳುಹಿಸಲಾಗುವುದು. ನೀರಾವರಿ ಅಧಿಕಾರಿಗಳು ಮಳೆಯ ಪ್ರಮಾಣ ಮತ್ತು ಇತರ ಕಾರಣಗಳನ್ನು ಲಕ್ಷಿಸಿ ವೇಳಾಪಟ್ಟಿಯನ್ನು ಬದಲಿಸಬಹುದು.
3) ನೀರು ಒದಗಿಸಲಾಗುವ ಕ್ಷೇತ್ರ "ಅ" ಮತ್ತು "ಬ" ದಲ್ಲಿ ಒದಗಿಸಿದ ಕ್ಷೇತ್ರ.
4) ಶಿಫಾರಸ್ಸು ಮಾಡಿದ ಬೆಳೆಗಳು.

| ಕ್ರ.ಸಂ. | ಬೆಳೆಗಳ ಹೆಸರು | ಬಿತ್ತುವುದು | ಬೆಳೆಗಳ ಅವಧಿ |
|---|---|---|---|
| 1 | ಹೈಬ್ರೀಡ್ ಜೋಳ | ಜೂನ್ 1 ರಿಂದ 30ರ ವರೆಗೆ | 110 ರಿಂದ 115 ದಿನಗಳು |
| 2 | ಹೈಬ್ರೀಡ್ ಬಾಜ್ರಾ | ಜುಲೈ | 80 ರಿಂದ 90 ದಿನಗಳು |
| 3 | ಹೈಬ್ರೀಡ್ ಗೋವಿನ ಜೋಳ | ಜುಲೈ | 110 ರಿಂದ 120 ದಿನಗಳು |
| 4 | ಶೇಂಗಾ | ಜೂನ್ | 110 ರಿಂದ 120 ದಿನಗಳು |
| 5 | ಸೂರ್ಯಕಾಂತಿ | ಜೂನ್ | 80 ರಿಂದ 100 ದಿನಗಳು |
| 6 | ಬೇರೆ ದ್ವಿದಳ ಧಾನ್ಯಗಳು | ಜೂನ್-ಜುಲೈ | 65 ರಿಂದ 80 ದಿನಗಳು |
| 7 | ತೊಗರಿ (ಎರಡು ಋತು) | ಜೂನ್-ಜುಲೈ | 185 ರಿಂದ 200 ದಿನಗಳು |
| 8 | ಹತ್ತಿ (ಎರಡು ಋತು) | ಜೂನ್-ಜುಲೈ | 180 ರಿಂದ 200 ದಿನಗಳು |

5) ಈ ಕೆಳಗಿನ ಬೆಳೆಗಳನ್ನು ಕಡ್ಡಾಯವಾಗಿ ಬೆಳೆಯಲು ನಿಷೇಧಿಸಲ್ಪಟ್ಟಿದೆ.
   ಭತ್ತ, ಕಬ್ಬು, ಬಾಳೆ, ವೀಳೆದೆಲೆ ಹಾಗೂ ಹೆಚ್ಚು ನೀರು ಬೇಕಾಗುವಂತಹ ಬೆಳೆಗಳು.
6) ಮುಂಗಾರು 2003ರ ಬೆಳೆಗೆ ನೀರು ಒದಗಿಸುವ ತಾಲ್ಲೂಕುವಾರು, ಗ್ರಾಮವಾರು, ಕ್ಷೇತ್ರದ ನಿರ್ಧರಿತ ತಪಶೀಲು "ಅ" ಮತ್ತು "ಬ" ದಲ್ಲಿಯ ನೀರಾವರಿಗೊಳಪಡುವ ಮುಂಗಾರು ಕ್ಷೇತ್ರದಲ್ಲಿ ಮತ್ತು ದೀರ್ಘಾವಧಿ ಕ್ಷೇತ್ರದಲ್ಲಿ (ಎರಡು ಋತು) ಬೆಳೆಗಳ ನಿರ್ಧರಿತ ಪ್ರಮಾಣ ಅನುಕ್ರಮವಾಗಿ 47.50 ಶೇಕಡಾ ಮತ್ತು 42.50 ಇರುವುದೆಂಬುದನ್ನು ಗಮನಿಸಬೇಕು. ಆದ್ದರಿಂದ ರೈತರು ಅಧಿಸೂಚಿತ ಕ್ಷೇತ್ರದ ಪ್ರತಿಶತ ಕ್ಷೇತ್ರಕ್ಕೆ ಮಾತ್ರ ನೀರನ್ನು ಪಡೆಯುವುದು.

ಅಧೀಕ್ಷಕ ಅಭಿಯಂತರರು,
ಕೃಭಾಜನಿ(ನಿ) ನಿಮಪೋ. ವೃತ್ತ-1, ನಾರಾಯಣಪುರ.

